ಸಾಧ್ಯವಾಗಿರುವುದಿಲ್ಲ. ಈಗ ಬೀದರ್/ದಾವಣಗೆರೆ/ ಚಿತ್ರದುರ್ಗ/ ಗುಲ್ಬರ್ಗ ಮತ್ತು ರಾಯಚೂರು ಜಿಲ್ಲೆಗಳು 2006-07ನೇ ಸಾಲಿನಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಅಧಿನಿಯಮದಡಿ ವಿಲೀನಗೊಂಡಿರುವುದರಿಂದ, ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯ ಲೆಕ್ಕಶೀರ್ಷಿಕೆಯಿಂದ ರಾಜ್ಯದ ಪಾಲಿನ ಶೇ.20ರ ಭಾಗಾಂಶದ ಒಟ್ಟು ರೂ.20,44,000ಗಳನ್ನು ಕರ್ನಾಟಕ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಕಾರ್ಯಕ್ರಮಗಳ ಅನುಷ್ಠಾನಕ್ಕೆ ಬಿಡುಗಡೆ ಮಾಡಲು ತೀರ್ಮಾನಿಸಿದೆ.

ಆದುದರಿಂದ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶದ ಸಂಖ್ಯೆ. ಗ್ರಾಅಪ.16.ಎಸ್‌ಜಿಆರ್‌ವೈ.2006 ಬೆಂಗಳೂರು, ದಿನಾಂಕ. 6ನೇ ನವೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯಡಿ 2005-06ನೇ ಸಾಲಿನಲ್ಲಿ ಬಿಡುಗಡೆ ಮಾಡಬೇಕಾದ ಬಾಕಿ ರಾಜ್ಯದ ಪಾಲಿನ ಹೆಚ್ಚುವರಿ ಅನುದಾನವಾದ ರೂ.20,44,000ಗಳನ್ನು (ರೂ.ಇಪ್ಪತ್ತು ಲಕ್ಷದ ನಲವತ್ತ ನಾಲ್ಕು ಸಾವಿರ ಮಾತ್ರ) ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಕಾರ್ಯಕ್ರಮಗಳಿಗೆ ಬಳಸಲು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಬೀದರ್/ದಾವಣಗೆರೆ/ಚಿತ್ರದುರ್ಗ/ಗುಲ್ಬರ್ಗ ಮತ್ತು ರಾಯಚೂರು ಇವರುಗಳಿಗೆ ಅನುಬಂಧದಲ್ಲಿ ನಮೂದಿಸಿರುವಂತೆ, ಬಿಡುಗಡೆ ಮಾಡಿದೆ.

ಕಾರ್ಯಕ್ರಮಗಳ ವೆಚ್ಚವನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಯಲ್ಲಿ ಭರಿಸತಕ್ಕದ್ದು.

ಜಿಲ್ಲಾ ಪಂಚಾಯತ್ "2505-ಗ್ರಾಮೀಣ ಉದ್ಯೋಗ-60-ಇತರೆ ಕಾರ್ಯಕ್ರಮಗಳು-196-ತಾಲ್ಲೂಕು ಪಂಚಾಯತಿಗಳಿಗೆ ಸಹಾಯ-6-ಜಿಲ್ಲಾ ಪಂಚಾಯತಿಗಳು-04-ಬ್ಲಾಕ್ ಅನುದಾನ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ (ಯೋಜನೆ) (2505-60-196-6-04) 2006-07 (ಯೋಜನೆ)"

ಕಾರ್ಯಕ್ರಮಗಳ ಅನುಷ್ಠಾನದಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಗೆ ಕೇಂದ್ರ ಸರ್ಕಾರವು ನೀಡಲಾದ ನಿರ್ವಹಣೆಯ ಮಾರ್ಗಸೂಚಿಗಳನ್ನು ಮತ್ತು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಕಾಲಕಾಲಕ್ಕೆ ನೀಡುವ/ನೀಡಲಾದ ಸೂಚನೆಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

ಸಂಬಂಧಪಟ್ಟ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಸಹಾಯಾನುದಾನ ಬಿಲ್ಲಿನ ಮೇಲೆ, ಅನುದಾನವನ್ನು ಖಜಾನೆಯಿಂದ ಡ್ರಾ ಮಾಡಿ ವೆಚ್ಚವನ್ನು ಆರ್ಥಿಕ ಇಲಾಖೆಯ ಆದೇಶದ ಸಂ. ಎಫ್‌ಡಿ. 7.ಜೆಡ್‌ಪಿಎ. 03. ದಿನಾಂಕ.8.9.2004 ಮತ್ತು 14.7.2005 ರನ್ವಯ ನಿರ್ವಹಣೆ ಮಾಡತಕ್ಕದ್ದು.

ಸರ್ಕಾರದ ಆದೇಶವನ್ನು ಈ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ. ಗ್ರಾಅಪ/487/ಪಿಬಿಎಸ್/2006 ದಿನಾಂಕ.2.11.2006ರಲ್ಲಿ ಸಹಮತಿಸಿದಂತೆ, ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಶಾಂತರಾಜ್**
ನಿರ್ದೇಶಕರು,
ಸ್ವ ಉದ್ಯೋಗ ಕಾರ್ಯಕ್ರಮಗಳು ಹಾಗೂ
ಪದ ನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ANNEXURE**

**G.O.NO.RDP:16:SGR:2006 BANGALORE, DATED:06.11.2006**

**Statement showing the release of the additional IIIrd instalment of State share pertaining to 2005-06 under SGRY during 2006-07 to Zilla Panchayats for utilisation to NREGA programme.**

**(Rs.in lakhs)**

| Sl. No. | District | Object Code | Additional IIIrd instalment of funds released by GOI vide letter dt.30.3.06 | State share proposed for releases as per Column No.4 | Funds being released in this Order under Head of Account (2505-60-196-6-94) 20% ZP share |
|---|---|---|---|---|---|
| 1 | 2 | 3 | 4 | 5 | 6 |
| 1 | Bidar | 419 | 49.69 | 16.56 | 3.31 |
| 2 | Chitradurga | 403 | 58.26 | 19.42 | 3.89 |
| 3 | Davanagere | 451 | 55.03 | 18.34 | 3.66 |
| 4 | Gulbarga | 417 | 100.23 | 33.41 | 6.68 |
| 5 | Raichur | 420 | 43.43 | 14.48 | 2.90 |
| | **Total:** | | **306.64** | **102.21** | **20.44** |

**R. Shantharaj**
Director
Self Employment Programmes &
E/o.Addl.Secretary to Government
Rural Development & Panchayat Raj Dept.

P.R. 1819

**ವಿಷಯ:** "ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಅಧಿನಿಯಮ-2005" ರಡಿ ಕೈಗೊಂಡ ಕಾಮಗಾರಿಗಳ ದಾಖಲಾತಿ, ಲೆಕ್ಕಪತ್ರಗಳ ನಿರ್ವಹಣೆಗಾಗಿ ತಾಲ್ಲೂಕು ಪಂಚಾಯತಿಗಳಲ್ಲಿ ಕಾರ್ಯಕಾರಿ ಸಹಾಯಕರನ್ನು ನೇಮಕಾತಿ ಮಾಡುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶದ ಸಂಖ್ಯೆ.ಗ್ರಾಅಪ.12.ಉಖಾಯೋ.2006 ದಿನಾಂಕ.10.8.2006

**ಪ್ರಸ್ತಾವನೆ:**

ಉಲ್ಲೇಖಿತ ಸುತ್ತೋಲೆಯಂತೆ, "ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಅಧಿನಿಯಮ-2005" ರ ಯೋಜನೆಯಡಿ ಕೈಗೊಂಡ ಕಾಮಗಾರಿಗಳ ದಾಖಲಾತಿಗಳ ಹಣಕಾಸಿನ ಲೆಕ್ಕಪತ್ರ ನಿರ್ವಹಣೆ ಮಾಡುವುದಕ್ಕಾಗಿ ಪ್ರತಿ ತಾಲ್ಲೂಕು ಪಂಚಾಯತಿಗೆ ಇಬ್ಬರಂತೆ ಕಾರ್ಯಕಾರಿ ಸಹಾಯಕರನ್ನು ನೇಮಕಾತಿ ಮಾಡಿಕೊಳ್ಳುವಂತೆ ಆದೇಶಿಸಲಾಗಿತ್ತು. ವಾಣಿಜ್ಯ ಪದವೀಧರರು ಸಾಕಷ್ಟು ಸಂಖ್ಯೆಯಲ್ಲಿ ದೊರೆಯುತ್ತಿಲ್ಲವಾದ ಕಾರಣ, 10+2 ಹಂತದಲ್ಲಿ ವಿಜ್ಞಾನದ ವಿಷಯದಲ್ಲಿ ತೇರ್ಗಡೆಯಾಗಿರುವವರಿಗೆ ಮತ್ತು ವಿಜ್ಞಾನ ಪದವೀಧರರಿಗೂ ಸಹ ಅವಕಾಶ ನೀಡಬೇಕೆಂದು ಬೇಡಿಕೆಗಳು ಜಿಲ್ಲೆಗಳಿಂದ ಬಂದಿರುವುದರಿಂದ ಇವುಗಳನ್ನು ಸರ್ಕಾರ ಪರಿಗಣಿಸಿ ಉಲ್ಲೇಖಿತ ಆದೇಶವನ್ನು ಭಾಗಶ: ಮಾರ್ಪಡಿಸಿ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ.ಗ್ರಾಅಪ:12:ಉಖಾಯೋ:2006 ಬೆಂಗಳೂರು, ದಿನಾಂಕ: 11ನೇ ಡಿಸೆಂಬರ್ 2006**

"ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಅಧಿನಿಯಮ-2005" ರ ಅಡಿಯ "ಕರ್ನಾಟಕ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ" ಯಲ್ಲಿ ಕೈಗೊಳ್ಳುವ ಕಾಮಗಾರಿಗಳ ದಾಖಲಾತಿ, ಹಣಕಾಸು ಲೆಕ್ಕಪತ್ರ ನಿರ್ವಹಣೆ ಮಾಡಲು ಪ್ರತಿ ತಾಲ್ಲೂಕು ಪಂಚಾಯತಿಗೆ ಒಬ್ಬರಂತೆ ಕಾರ್ಯಕಾರಿ ಸಹಾಯಕ (Executive Assistants) ನೇಮಕಾತಿ ಮಾಡಿಕೊಳ್ಳಲು ಅನುಮೋದನೆ ನೀಡಿದೆ.

ಸದರಿ ಕಾರ್ಯಕಾರಿ ಸಹಾಯಕರುಗಳ ಸಂಭಾವನೆ ವೆಚ್ಚವನ್ನು, ಕರ್ನಾಟಕ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ವೆಚ್ಚದ ಅಥವಾ ಆಡಳಿತಾತ್ಮಕ ವೆಚ್ಚದ ನಿಧಿಯಿಂದ ಭರಿಸತಕ್ಕದ್ದು.

**ನೇಮಕಾತಿ ಪ್ರಕ್ರಿಯೆ, ನೇಮಕಾತಿ ನಿಯಮ ಮತ್ತು ಷರತ್ತುಗಳು:**

1. ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ರ ಪ್ರಕರಣ 113ರಡಿ ಅಗತ್ಯವಿರುವಂತೆ ಮುಖ್ಯ ಕಾರ್ಯನಿರ್ವಹಣಾಧಿಕಾರಿಯ ಪೂರ್ವಾನುಮೋದನೆಯೊಂದಿಗೆ, ತಾಲ್ಲೂಕು ಪಂಚಾಯತಿಗಳು, ತಮ್ಮ ತಾಲ್ಲೂಕು ಪಂಚಾಯತಿಯಲ್ಲಿ ಪೂರ್ಣಕಾಲಿಕವಾಗಿ ಕೆಲಸ ನಿರ್ವಹಿಸಲು ಇಚ್ಛಿಸುವ ಹಾಗೂ ಈ ಕೆಳಗಿನಂತೆ ವಿದ್ಯಾರ್ಹತೆ ಹೊಂದಿರುವ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಬೇಕು. ಅರ್ಹತೆಯ ಮೇಲೆ ಪಟ್ಟಿ ಮಾಡಿ, ಆ ಪಟ್ಟಿಯಲ್ಲಿ ಪ್ರಥಮ ಇರುವವರನ್ನು ಅರ್ಹತೆಯ ಪರೀಕ್ಷೆಗಾಗಿ ಮುಖ್ಯಕಾರ್ಯನಿರ್ವಹಣಾಧಿಕಾರಿ ನಿರ್ಧರಿಸುವ, ಆ ಜಿಲ್ಲೆಯ ಯಾವುದಾದರೂ ತಾಲ್ಲೂಕು ಅಥವಾ ಜಿಲ್ಲಾ ಕೇಂದ್ರಕ್ಕೆ ಕಳುಹಿಸಬೇಕು. ಒಂದು ವೇಳೆ ಆ ಅಭ್ಯರ್ಥಿ ಉತ್ತೀರ್ಣರಾಗದಿದ್ದಲ್ಲಿ ಪಟ್ಟಿಯಲ್ಲಿ ಎರಡನೆಯವರನ್ನು, ನಂತರ ನಿಗದಿ ಪಡಿಸುವ ದಿನಾಂಕಕ್ಕೆ ಪರೀಕ್ಷೆಗೆ ಹಾಜರಾಗಲು ಸೂಚಿಸಬೇಕು.
2. ಕಾರ್ಯಕಾರಿ ಸಹಾಯಕರನ್ನು ಸಂಬಂಧಪಟ್ಟ ತಾಲ್ಲೂಕು ಪಂಚಾಯತಿಗಳು ಆರು ತಿಂಗಳವರೆಗೆ ಅಥವಾ ಮುಂದಿನ ಆದೇಶ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯ ವರೆಗೆ ಮಾತ್ರ ಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳಬೇಕು.
3. ಈ ರೀತಿ ನೇಮಕಗೊಂಡವರು ಈ ಹುದ್ದೆಗೆ ಮುಂದೆ ಖಾಯಂ ಆಗಿ ನೇಮಕ ಮಾಡಿಕೊಳ್ಳಬೇಕೆಂದು ಮನವಿ ಸಲ್ಲಿಸಲು ಅವಕಾಶ ಇರುವುದಿಲ್ಲ.
4. ಕಾರ್ಯಕಾರಿ ಸಹಾಯಕರ ವಿದ್ಯಾರ್ಹತೆಯ ವಿವರಗಳು ಈ ಕೆಳಗಿನಂತಿವೆ:
   ಅ) ಮೂಲ ವಿದ್ಯಾರ್ಹತೆ:
   ವಾಣಿಜ್ಯ/ವಿಜ್ಞಾನ ವಿಷಯಗಳಲ್ಲಿ ಪದವಿ ಅಥವಾ ವಾಣಿಜ್ಯ/ವಿಜ್ಞಾನ ವಿಷಯಗಳಲ್ಲಿ 10+2 ಉತ್ತೀರ್ಣ ಅಥವಾ ಕಂಪ್ಯೂಟರ್‌ನಲ್ಲಿ ಡಿಪ್ಲೊಮೊ
   ಆ) ಕಂಪ್ಯೂಟರ್ ವಿಜ್ಞಾನ
   ಎಂ.ಎಸ್.ವರ್ಡ್ (M.S.Word)
   ಎಕ್ಸೆಲ್(Excel)
   ಕನ್ನಡ (ನುಡಿ 'ಬಿ' ಅಕ್ಷರ) ಮತ್ತು ಇಂಗ್ಲೀಷಿನಲ್ಲಿ ಬೆರಳಚ್ಚು ಮಾಡುವುದು
5. ಅ) ಆಯ್ಕೆಯಲ್ಲಿ ಈ ಕೆಳಗಿನಂತೆ ಆದ್ಯತೆ ನೀಡಬೇಕು
   1. ವಾಣಿಜ್ಯ ಪದವೀಧರರು - ಮೊದಲನೆಯ
   2. ವಿಜ್ಞಾನ ಪದವೀಧರರು - ಎರಡನೆಯ
   3. ವಾಣಿಜ್ಯ ಪಠ್ಯದಲ್ಲಿ 10+2 ಉತ್ತೀರ್ಣ - ಮೂರನೆಯ
   4. ವಿಜ್ಞಾನ ಪಠ್ಯದಲ್ಲಿ 10+2 ಉತ್ತೀರ್ಣ - ನಾಲ್ಕನೆಯ

   ಆ) ಸ್ಥಳೀಯರಿಗೆ ಆದ್ಯತೆ
   i) ಆ ತಾಲ್ಲೂಕು ಪಂಚಾಯತಿ ವ್ಯಾಪ್ತಿಯಲ್ಲಿ ಖಾಯಂ ವಾಸವಾಗಿರುವವರನ್ನು ಪರಿಗಣಿಸಬೇಕು
   ii) ಆ ತಾಲ್ಲೂಕಿನ ವ್ಯಾಪ್ತಿಯಲ್ಲಿ ಅರ್ಹ ಅರ್ಜಿದಾರರು ಲಭ್ಯವಾಗದಿದ್ದಲ್ಲಿ ಆಗ ಆ ಜಿಲ್ಲೆಯಲ್ಲಿ ಖಾಯಂ ವಾಸವಾಗಿರುವವರನ್ನು ಪರಿಗಣಿಸಬೇಕು.
6. ಒಂದು ತಾಲ್ಲೂಕು ಪಂಚಾಯತಿಗೆ ಒಬ್ಬರನ್ನು ಮಾತ್ರ ನೇಮಿಸಬೇಕು.

7. 01.01.2007 ಅಥವಾ ಅವರು ಕರ್ತವ್ಯಕ್ಕೆ ವರದಿ ಮಾಡಿಕೊಂಡ ದಿನಾಂಕ ಇವುಗಳಲ್ಲಿ ಯಾವುದು ನಂತರವೋ ಆ ದಿನದಿಂದ ಅನ್ವಯವಾಗುವಂತೆ ಪ್ರತಿ ತಿಂಗಳಿಗೆ ರೂ.2744/-(ರೂಪಾಯಿ ಎರಡು ಸಾವಿರದ ಏಳು ನೂರ ನಲವತ್ತ ನಾಲ್ಕು ಮಾತ್ರ) ದರದಲ್ಲಿ (ಕಾರ್ಮಿಕ ಇಲಾಖೆಯ ಅಧಿಸೂಚನೆ ಸಂಖ್ಯೆ.KAE 38 LMW 01 ದಿನಾಂಕ.14.01.04ರ ಪ್ರಕಾರ) ಸಂಭಾವನೆ ನೀಡಬೇಕು.
8. ಈ ಇಲಾಖೆಯ ಸರ್ಕಾರಿ ಆದೇಶದ ಸಮಸಂಖ್ಯೆಯ ದಿನಾಂಕ.10.8.2006ರಲ್ಲಿ ನೇಮಕ ಗೊಂಡವರು ತೃಪ್ತಿಕರವಾಗಿ ಕೆಲಸ ನಿರ್ವಹಿಸುತ್ತಿದ್ದು, ಮುಂದುವರೆದಿದ್ದಲ್ಲಿ ಅವರು ಸಹ ದಿನಾಂಕ.1.1.2007ರಿಂದ ಷರತ್ತು ಸಂಖ್ಯೆ.7ರಂತೆ ಸಂಭಾವನೆ ಪಡೆಯಲು ಅರ್ಹತೆ ಪಡೆಯುತ್ತಾರೆ.
9. ಈ ಕೆಳಕಂಡ ಕಾರಣಗಳಿಗಾಗಿ ಒಂದು ತಿಂಗಳ ಮುನ್ಸೂಚನೆಯನ್ನು ನೀಡಿ, ನೇಮಕಾತಿಯನ್ನು ರದ್ದುಪಡಿಸಬಹುದು.
   ಅ) ಮುಖ್ಯ ಕಾರ್ಯನಿರ್ವಾಹಣಾಧಿಕಾರಿಯವರ ಅಥವಾ ಕಾರ್ಯ ನಿರ್ವಾಹಣಾಧಿಕಾರಿ, ತಾಲ್ಲೂಕು ಪಂಚಾಯತಿಯವರ ಅಭಿಪ್ರಾಯದಂತೆ ಕಾರ್ಯ ನಿರ್ವಹಣೆಯು ತೃಪ್ತಿಕರವಾಗಿರದಿದ್ದಲ್ಲಿ
   ಆ) ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಅಧಿನಿಯಮ ಆ ತಾಲ್ಲೂಕು ಪಂಚಾಯತಿಗೆ ಅನ್ವಯಿಸದೇ ಇರುವಾಗ
10. ನೇಮಕಾತಿ ಹೊಂದಿದವರು ಸೇವೆಯಿಂದ ಮುಕ್ತಾಯಗೊಂಡ ಕೂಡಲೇ, ಅವರಿಗೆ ಸಲ್ಲಬೇಕಾಗಿರುವ ಬಾಕಿ ಹಣವನ್ನು ಯೋಜನೆಯ ನಿಧಿಯಿಂದ ಭರಿಸಲು ಸಾಧ್ಯವಾಗದಿದ್ದಲ್ಲಿ, ತಾಲ್ಲೂಕು ಪಂಚಾಯತಿ ನಿಧಿಯಿಂದ ಪಾವತಿಸಿ ಲೆಕ್ಕ ಚುಕ್ತಾ ಮಾಡಬೇಕು.
11. ಕಾರ್ಯಕಾರಿ ಸಹಾಯಕರಿಗೆ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಅಧಿನಿಯಮದ ಅನುಷ್ಠಾನ ಹೊರತುಪಡಿಸಿ ಬೇರೆ ಯಾವ ಕೆಲಸವನ್ನು ವಹಿಸಬಾರದು.
12. ಈ ನೇಮಕಾತಿಯು ಕೇವಲ ಕರ್ನಾಟಕ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನದ ಉದ್ದೇಶಕ್ಕೆ ಮಾತ್ರ ಸೀಮಿತವಾಗಿದ್ದು, ಪಂಚಾಯತಿಗಳಲ್ಲಿ ಇರುವ ಮಂಜೂರಾದ ಹುದ್ದೆಗಳಿಗೆ ಇವುಗಳನ್ನು ನೇಮಕಾತಿ ಮಾಡಲಾಗಿದೆಯೆಂದು ಭಾವಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ.ಸಂಖ್ಯೆ.ಆಇ.193.ವೆಚ್ಚ-6/2006 ದಿನಾಂಕ. 28.2.2006ರಲ್ಲಿ ನೀಡಿರುವ ಸಹಮತಿ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಶಾಂತರಾಜ್**
ನಿರ್ದೇಶಕರು,
ಸ್ವ ಉದ್ಯೋಗ ಕಾರ್ಯಕ್ರಮಗಳು ಹಾಗೂ
ಪದ ನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 1818

**ವಿಷಯ:** "ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಅಧಿನಿಯಮ-2005" ರಡಿ ಕೈಗೊಂಡ ಕಾಮಗಾರಿಗಳ ದಾಖಲಾತಿ, ಲೆಕ್ಕಪತ್ರಗಳ ನಿರ್ವಹಣೆಗಾಗಿ ಗ್ರಾಮ ಪಂಚಾಯತಿಗಳಲ್ಲಿ ಕಾರ್ಯಕಾರಿ ಸಹಾಯಕರನ್ನು ನೇಮಕಾತಿ ಮಾಡುವ ಬಗ್ಗೆ.

**ಉಲ್ಲೇಖ:** ಈ ಇಲಾಖೆಯ ಸುತ್ತೋಲೆಯ ಸಂ.ಗ್ರಾಅಪ.12.ಉಖಾಯೋ.2006 ದಿನಾಂಕ.1.4.2006 ಮತ್ತು ಆದೇಶ ಸಮಸಂಖ್ಯೆಯ ದಿನಾಂಕ.10.8.2006.

**ಪ್ರಸ್ತಾವನೆ:**

ಉಲ್ಲೇಖಿತ ಸುತ್ತೋಲೆಯಂತೆ, "ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಅಧಿನಿಯಮ-2005" ರ ಯೋಜನೆಯಡಿ ಕೈಗೊಂಡ ಕಾಮಗಾರಿಗಳ ದಾಖಲಾತಿಗಳ ಹಣಕಾಸಿನ ಲೆಕ್ಕಪತ್ರ ನಿರ್ವಹಣೆ ಮಾಡುವುದಕ್ಕಾಗಿ ಪ್ರತಿ ಗ್ರಾಮ ಪಂಚಾಯತಿಗೆ ಒಬ್ಬರಂತೆ ಕಾರ್ಯಕಾರಿ ಸಹಾಯಕರನ್ನು ನೇಮಕಾತಿ ಮಾಡಿಕೊಳ್ಳುವಂತೆ ಸೂಚಿಸಲಾಗಿತ್ತು. ಈ ಯೋಜನೆಯ ನಿರ್ವಹಣೆಯಲ್ಲಿ, ಗ್ರಾಮ ಪಂಚಾಯತಿಗಳಲ್ಲಿರುವ ಕಾರ್ಯದ ಒತ್ತಡವನ್ನು ಪರಿಗಣಿಸಿ, ಇನ್ನೊಬ್ಬ ಕಾರ್ಯಕಾರಿ ಸಹಾಯಕರನ್ನು ಗ್ರಾಮ ಪಂಚಾಯತಿಯಲ್ಲಿ ನೇಮಕ ಮಾಡಿಕೊಳ್ಳಲು ಆದೇಶಿಸಲಾಗಿತ್ತು.

ವಾಣಿಜ್ಯ ಪದವೀಧರರು ಸಾಕಷ್ಟು ಸಂಖ್ಯೆಯಲ್ಲಿ ದೊರೆಯುತ್ತಿಲ್ಲವಾದ ಕಾರಣ, 10+2 ಹಂತದಲ್ಲಿ ವಿಜ್ಞಾನದ ವಿಷಯದಲ್ಲಿ ತೇರ್ಗಡೆಯಾಗಿರುವವರಿಗೆ ಮತ್ತು ವಿಜ್ಞಾನ ಪದವೀಧರರಿಗೂ ಸಹ ಅವಕಾಶ ನೀಡಬೇಕೆಂದು ಬೇಡಿಕೆಗಳು ಜಿಲ್ಲೆಗಳಿಂದ ಬಂದಿರುವುದರಿಂದ ಇವುಗಳನ್ನು ಸರ್ಕಾರ ಪರಿಗಣಿಸಿ ಉಲ್ಲೇಖಿತ ಆದೇಶಗಳನ್ನು ಭಾಗಶ: ಮಾರ್ಪಡಿಸಿ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ.ಗ್ರಾಅಪ.12.ಉಖಾಯೋ:2006 ಬೆಂಗಳೂರು, ದಿನಾಂಕ: 11ನೇ ಡಿಸೆಂಬರ್ 2006**

"ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಅಧಿನಿಯಮ-2005" ರ ಅಡಿಯ "ಕರ್ನಾಟಕ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ" ಯಲ್ಲಿ ಕೈಗೊಳ್ಳುವ ಕಾಮಗಾರಿಗಳ ದಾಖಲಾತಿ, ಹಣಕಾಸು ಲೆಕ್ಕಪತ್ರ ನಿರ್ವಹಣೆ ಮಾಡಲು ಪ್ರತಿ ಗ್ರಾಮ ಪಂಚಾಯತಿಗೆ ಒಬ್ಬರಂತೆ ಕಾರ್ಯಕಾರಿ ಸಹಾಯಕ (Executive Assistants) ನೇಮಕಾತಿ ಮಾಡಿಕೊಳ್ಳಲು ಅನುಮೋದನೆ ನೀಡಿದೆ.

ಸದರಿ ಕಾರ್ಯಕಾರಿ ಸಹಾಯಕರುಗಳ ಸಂಭಾವನೆ ವೆಚ್ಚವನ್ನು, ಕರ್ನಾಟಕ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ವೆಚ್ಚದ ಅಥವಾ ಆಡಳಿತಾತ್ಮಕ ವೆಚ್ಚದ ನಿಧಿಯಿಂದ ಭರಿಸತಕ್ಕದ್ದು.

**ನೇಮಕಾತಿ ಪ್ರಕ್ರಿಯೆ, ನೇಮಕಾತಿ ನಿಯಮ ಮತ್ತು ಷರತ್ತುಗಳು:**

1. ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ರ ಪ್ರಕರಣ 113ರಡಿ ಅಗತ್ಯವಿರುವಂತೆ ಮುಖ್ಯ ಕಾರ್ಯನಿರ್ವಹಣಾಧಿಕಾರಿಯ ಪೂರ್ವಾನುಮೋದನೆಯೊಂದಿಗೆ, ಗ್ರಾಮ ಪಂಚಾಯತಿಗಳು, ತಮ್ಮ ಗ್ರಾಮ ಪಂಚಾಯತಿಯಲ್ಲಿ ಪೂರ್ಣಕಾಲಿಕವಾಗಿ ಕೆಲಸ ನಿರ್ವಹಿಸಲು ಇಚ್ಚಿಸುವ ಹಾಗೂ ಈ ಕೆಳಗಿನಂತೆ ವಿದ್ಯಾರ್ಹತೆ ಹೊಂದಿರುವ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಬೇಕು. ಅರ್ಹತೆಯ ಮೇಲೆ ಪಟ್ಟಿ ಮಾಡಿ, ಆ ಪಟ್ಟಿಯಲ್ಲಿ ಪ್ರಥಮ ಇರುವವರನ್ನು ಅರ್ಹತೆಯ ಪರೀಕ್ಷೆಗಾಗಿ ಮುಖ್ಯ ಕಾರ್ಯನಿರ್ವಹಣಾಧಿಕಾರಿ ನಿರ್ಧರಿಸುವ, ಆ
   ಜಿಲ್ಲೆಯ ಯಾವುದಾದರೂ ತಾಲ್ಲೂಕು ಅಥವಾ ಜಿಲ್ಲಾ ಕೇಂದ್ರಕ್ಕೆ ಕಳುಹಿಸಬೇಕು. ಒಂದು ವೇಳೆ ಆ ಅಭ್ಯರ್ಥಿ ಉತ್ತೀರ್ಣರಾಗದಿದ್ದಲ್ಲಿ ಪಟ್ಟಿಯಲ್ಲಿ ಎರಡನೆಯವರನ್ನು, ನಂತರ ನಿಗದಿ ಪಡಿಸುವ ದಿನಾಂಕಕ್ಕೆ ಪರೀಕ್ಷೆಗೆ ಹಾಜರಾಗಲು ಸೂಚಿಸಬೇಕು.
2. ಕಾರ್ಯಕಾರಿ ಸಹಾಯಕರನ್ನು ಸಂಬಂಧಪಟ್ಟ ಗ್ರಾಮ ಪಂಚಾಯತಿಗಳು ಆರು ತಿಂಗಳವರೆಗೆ ಅಥವಾ ಮುಂದಿನ ಆದೇಶ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳಬೇಕು.
3. ಈ ರೀತಿ ನೇಮಕಗೊಂಡವರು ಈ ಹುದ್ದೆಗೆ ಮುಂದೆ ಖಾಯಂ ಆಗಿ ನೇಮಕ ಮಾಡಿಕೊಳ್ಳಬೇಕೆಂದು ಮನವಿ ಸಲ್ಲಿಸಲು ಅವಕಾಶ ಇರುವುದಿಲ್ಲ.
4. ಕಾರ್ಯಕಾರಿ ಸಹಾಯಕರ ವಿದ್ಯಾರ್ಹತೆಯ ವಿವರಗಳು ಈ ಕೆಳಗಿನಂತಿವೆ:
   ಅ) ಮೂಲ ವಿದ್ಯಾರ್ಹತೆ:
   ವಾಣಿಜ್ಯ/ವಿಜ್ಞಾನ ವಿಷಯಗಳಲ್ಲಿ ಪದವಿ ಅಥವಾ ವಾಣಿಜ್ಯ/ವಿಜ್ಞಾನ ವಿಷಯಗಳಲ್ಲಿ 10+2 ಉತ್ತೀರ್ಣ ಅಥವಾ ಕಂಪ್ಯೂಟರ್‌ನಲ್ಲಿ ಡಿಪ್ಲೊಮೊ
   ಆ) ಕಂಪ್ಯೂಟರ್ ವಿಜ್ಞಾನ
   ಎಂ.ಎಸ್.ವರ್ಡ್ (M.S.Word)
   ಎಕ್ಸೆಲ್(Excel)
   ಕನ್ನಡ (ನುಡಿ 'ಬಿ' ಅಕ್ಷರ್) ಮತ್ತು ಇಂಗ್ಲೀಷಿನಲ್ಲಿ ಬೆರಳಚ್ಚು ಮಾಡುವುದು
5. ಅ) ಆಯ್ಕೆಯಲ್ಲಿ ಈ ಕೆಳಗಿನಂತೆ ಆದ್ಯತೆ ನೀಡಬೇಕು

| | |
|---|---|
| 1. ವಾಣಿಜ್ಯ ಪದವೀಧರರು | - ಮೊದಲನೆಯ |
| 2. ವಿಜ್ಞಾನ ಪದವೀಧರರು | - ಎರಡನೆಯ |
| 3. ವಾಣಿಜ್ಯ ಪಠ್ಯದಲ್ಲಿ 10+2 ಉತ್ತೀರ್ಣ | - ಮೂರನೆಯ |
| 4. ವಿಜ್ಞಾನ ಪಠ್ಯದಲ್ಲಿ 10+2 ಉತ್ತೀರ್ಣ | - ನಾಲ್ಕನೆಯ |

   ಆ) ಸ್ಥಳೀಯರಿಗೆ ಆದ್ಯತೆ
   i) ಆ ಗ್ರಾಮ ಪಂಚಾಯತಿಯಲ್ಲಿ ಖಾಯಂ ವಾಸವಾಗಿರುವವರಿಗೆ ಪ್ರಥಮ ಆದ್ಯತೆ ನೀಡಬೇಕು.
   ii) ಆ ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ಅರ್ಹ ಅರ್ಜಿದಾರರು ಲಭ್ಯವಾಗದಿದ್ದಲ್ಲಿ, ಆಗ, ಆ ತಾಲ್ಲೂಕಿನಲ್ಲಿ ಖಾಯಂ ವಾಸವಾಗಿರುವವರನ್ನು ಪರಿಗಣಿಸಬೇಕು
   iii) ಆ ತಾಲ್ಲೂಕಿನ ವ್ಯಾಪ್ತಿಯಲ್ಲಿ ಅರ್ಹ ಅರ್ಜಿದಾರರು ಲಭ್ಯವಾಗದಿದ್ದಲ್ಲಿ ಆಗ ಆ ಜಿಲ್ಲೆಯಲ್ಲಿ ಖಾಯಂ ವಾಸವಾಗಿರುವವರನ್ನು ಪರಿಗಣಿಸಬೇಕು.
6. ಒಂದು ಗ್ರಾಮ ಪಂಚಾಯತಿಗೆ ಒಬ್ಬರನ್ನು ಮಾತ್ರ ನೇಮಿಸಬೇಕು
7. 01.01.2007 ಅಥವಾ ಅವರು ಕರ್ತವ್ಯಕ್ಕೆ ವರದಿ ಮಾಡಿಕೊಂಡ ದಿನಾಂಕ ಇವುಗಳಲ್ಲಿ ಯಾವುದು ನಂತರವೋ ಆ ದಿನದಿಂದ ಅನ್ವಯವಾಗುವಂತೆ ಪ್ರತಿ ತಿಂಗಳಿಗೆ ರೂ.2744/-(ರೂಪಾಯಿ ಎರಡು ಸಾವಿರದ ಏಳು ನೂರ ನಲವತ್ತ ನಾಲ್ಕು ಮಾತ್ರ) ದರದಲ್ಲಿ (ಕಾರ್ಮಿಕ ಇಲಾಖೆಯ ಅಧಿಸೂಚನೆ ಸಂಖ್ಯೆ.KAE 38 LMW 01 ದಿನಾಂಕ.14.01.04ರ ಪ್ರಕಾರ) ಸಂಭಾವನೆ ನೀಡಬೇಕು.
8. ಈ ಇಲಾಖೆಯ ಸುತ್ತೋಲೆ ಸಂ.ಗ್ರಾಅಪ.12.ಉಖಾಯೋ.2006 ದಿನಾಂಕ. 01.04.2006 ಮತ್ತು ಆದೇಶ ಸಮಸಂಖ್ಯೆ ದಿನಾಂಕ.10.8.2006ರ ನೇಮಕಗೊಂಡವರು ತೃಪ್ತಿಕರವಾಗಿ ಕೆಲಸ ನಿರ್ವಹಿಸುತ್ತಿದ್ದು ಮುಂದುವರೆದಿದ್ದಲ್ಲಿ ಅವರು ಸಹ ದಿನಾಂಕ.1.1.2007ರಿಂದ ಷರತ್ತು ಸಂಖ್ಯೆ.7ರಂತೆ ಸಂಭಾವನೆ ಪಡೆಯಲು ಅರ್ಹತೆ ಪಡೆಯುತ್ತಾರೆ.
9. ಈ ಕೆಳಕಂಡ ಕಾರಣಗಳಿಗಾಗಿ ಒಂದು ತಿಂಗಳ ಮುನ್ಸೂಚನೆಯನ್ನು ನೀಡಿ, ನೇಮಕಾತಿಯನ್ನು ರದ್ದುಪಡಿಸಬಹುದು.
   ಅ) ಮುಖ್ಯ ಕಾರ್ಯನಿರ್ವಾಹಣಾಧಿಕಾರಿಯವರ ಅಥವಾ ಕಾರ್ಯ ನಿರ್ವಾಹಣಾಧಿಕಾರಿಯವರ ಅಥವಾ ಗ್ರಾಮ ಪಂಚಾಯತಿಯವರ ಅಭಿಪ್ರಾಯದಂತೆ ಕಾರ್ಯನಿರ್ವಹಣೆಯು ತೃಪ್ತಿಕರವಾಗಿರದಿದ್ದಲ್ಲಿ
   ಆ) ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಅಧಿನಿಯಮ ಆ ಗ್ರಾಮ ಪಂಚಾಯತಿಗೆ ಅನ್ವಯಿಸದೇ ಇರುವಾಗ
10. ನೇಮಕಾತಿ ಹೊಂದಿದವರು ಸೇವೆಯಿಂದ ಮುಕ್ತಾಯಗೊಂಡ ಕೂಡಲೇ, ಅವರಿಗೆ ಸಲ್ಲಬೇಕಾಗಿರುವ ಬಾಕಿ ಹಣವನ್ನು ಯೋಜನೆಯ ನಿಧಿಯಿಂದ ಭರಿಸಲು ಸಾಧ್ಯವಾಗದಿದ್ದಲ್ಲಿ, ಗ್ರಾಮ ಪಂಚಾಯತಿ ನಿಧಿಯಿಂದ ಪಾವತಿಸಿ ಲೆಕ್ಕ ಚುಕ್ತಾ ಮಾಡಬೇಕು.

11. ಕಾರ್ಯಕಾರಿ ಸಹಾಯಕರಿಗೆ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಅಧಿನಿಯಮದ ಅನುಷ್ಠಾನ ಹೊರತುಪಡಿಸಿ ಬೇರೆ ಯಾವ ಕೆಲಸವನ್ನು ವಹಿಸಬಾರದು.
12. ಈ ನೇಮಕಾತಿಯು ಕೇವಲ ಕರ್ನಾಟಕ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನದ ಉದ್ದೇಶಕ್ಕೆ ಮಾತ್ರ ಸೀಮಿತವಾಗಿದ್ದು ಪಂಚಾಯತಿಗಳಲ್ಲಿ ಇರುವ ಮಂಜೂರಾದ ಹುದ್ದೆಗಳಿಗೆ ಇವುಗಳನ್ನು ನೇಮಕಾತಿ ಮಾಡಲಾಗಿದೆಯೆಂದು ಭಾವಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ.ಸಂಖ್ಯೆ.ಆಇ.193.ವೆಚ್ಚ-6/2006 ದಿನಾಂಕ. 28.2.2006ರಲ್ಲಿ ನೀಡಿರುವ ಸಹಮತಿ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶಾಂತರಾಜ್**

ಪಿ.ಆರ್. 1817

ನಿರ್ದೇಶಕರು,
ಸ್ವ ಉದ್ಯೋಗ ಕಾರ್ಯಕ್ರಮಗಳು ಹಾಗೂ
ಪದ ನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಬಿ.ಶಶಿಧರ್, ಸಹಾಯಕ ಸರ್ಕಾರಿ ಅಭಿಯೋಜಕರು, ಕೆ.ಆರ್.ಪೇಟೆ ಇವರ ವಿರುದ್ಧ ಇಲಾಖಾ ವಿಚಾರಣೆ ಬಗ್ಗೆ – ದಂಡನೆ ವಿಧಿಸುವಿಕೆ.

**ಓದಲಾಗಿದೆ:**
1. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಮೆಮೋ ನಂ.ಡಿಪಿಎನ್/ ಎಂವೈಎಸ್/ಸಿಆರ್–34/2001–02, ದಿನಾಂಕ 29.1.2002
2. ಕಾರಣ ಕೇಳುವ ಸೂಚನಾ ಪತ್ರ ಸಂಖ್ಯೆ:ಡಿಪಿಎನ್/ಕೇಂಸ/ ಜಿ–60/2000–01, ದಿನಾಂಕ 17/18.12.2002.
3. ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರ ನೇಮಕದ ಆದೇಶ ನಂ.ಡಿಪಿನ್/ಕೇಂಸ/ಜಿ–60/2000–01, ದಿನಾಂಕ 24.6.2003
4. ಇಲಾಖಾ ವಿಚಾರಣಾ ವರದಿ ದಿನಾಂಕ 7.10.2004
5. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಅವರ ಅರೆ ಸರ್ಕಾರಿ ಪತ್ರ ನಂ.ಡಿಪಿಎನ್/ಕೇಂಸ/ಜಿ–60/2000–01, ದಿನಾಂಕ 26.11.2005ರಲ್ಲಿ ನೀಡಿರುವ 2ನೇ ಕಾರಣ ಕೇಳುವ ನೋಟೀಸು.
6. ಶ್ರೀ ಬಿ.ಶಶಿಧರ್, ಸಹಾಯಕ ಸರ್ಕಾರಿ ಅಭಿಯೋಜಕರು, ಆರೋಪಿತ ಸರ್ಕಾರಿ ಅಧಿಕಾರಿ ಇವರ ಹೇಳಿಕೆ ದಿನಾಂಕ 29.12.2005
7. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಅವರ ಸರ್ಕಾರಿ ಪತ್ರ ನಂ.ಡಿಪಿಎನ್/ಕೇಂಸ/ಜಿ–60/ 2000–01, ದಿನಾಂಕ 21.4.2006

**ಪ್ರಸ್ತಾವನೆ:**

ಶ್ರೀ ಬಿ.ಶಶಿಧರ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ಕೃಷ್ಣರಾಜಪೇಟೆ, ಮಂಡ್ಯ ಜಿಲ್ಲೆ ಇವರ ವಿರುದ್ದ ಉಲ್ಲೇಖ (2)ರಲ್ಲಿ ನಮೂದಿಸಿರುವ ದಿನಾಂಕ 17/18.12.2002ರ ಕಾರಣ ಕೇಳುವ ಸೂಚನಾ ಪತ್ರದಲ್ಲಿ ಈ ಕೆಳಕಂಡ ಆರೋಪಗಳನ್ನು ಮಾಡಿ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ಅನುಸಾರ ಇಲಾಖಾ ವಿಚಾರಣೆಯನ್ನು ನಡೆಸುವ ಬಗ್ಗೆ ಆರೋಪಿತ ಅಧಿಕಾರಿಗಳ ಲೀಖಿತ ಹೇಳಿಕೆಯನ್ನು ನಿಗಧಿತ ಅವಧಿಯೊಳಗೆ ಸಲ್ಲಿಸುವಂತೆ ಸೂಚಿಸಲಾಗಿದೆ.

**ಆರೋಪ–1:**

ಅಪಾಧಿತ ಸರ್ಕಾರಿ ನೌಕರರು ಕೃಷ್ಣರಾಜಪೇಟೆ ನ್ಯಾಯಾಲಯದ ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕೆಲಸ ನಿರ್ವಹಿಸುತ್ತಿದ್ದಾಗ ಮುಖ್ಯ ಕಛೇರಿಯಿಂದ ದಿನಾಂಕ 29.1.2002 ರಂದು ಮೆಮೊ ನೀಡಿ, ಸಿ.ಸಿ.ನಂ.33:2000ರಲ್ಲಿ ದಿನಾಂಕ 7.7.2001 ಮತ್ತು 21.7.2001ರ, ಸಿ.ಸಿ.ನಂ. 243:2000ರಲ್ಲಿ ದಿನಾಂಕ 3.1.2001 ಮತ್ತು 4.1.2001ರ, ಸಿ.ಸಿ.ನಂ. 370:2000ರಲ್ಲಿ ದಿನಾಂಕ 8.8.2001ರ, ಸಿ.ಸಿ.ನಂ. 495:1998ರಲ್ಲಿ ದಿನಾಂಕ 16.8.2001ರ, ಸಿ.ಸಿ.ನಂ. 550:1998ರಲ್ಲಿ ದಿನಾಂಕ 4.9.2001ರ ಮತ್ತು ಸಿ.ಸಿ.ನಂ.740:1998ರಲ್ಲಿ ದಿನಾಂಕ 4.9.2001ರ ಆರ್ಡರ್ ಶೀಟ್‌ಗಳ ದೃಢೀಕೃತ ನಕಲುಗಳನ್ನು ಅಭಿಯೋಗ ಉಪನಿರ್ದೇಶಕರು, ಮೈಸೂರು ವಿಭಾಗ, ಮೈಸೂರು ಇವರ ಮುಖಾಂತರ ಸಲ್ಲಿಸಲು ಮೇಲೆ(1)ರಲ್ಲಿ ಓದಲಾಗಿರುವ ಮೆಮೊದಲ್ಲಿ ತಿಳಿಸಿದ್ದರೂ ಸಹ ತಿಳಿಸಿದ ದಿನಾಂಕಗಳನ್ನು ಬಿಟ್ಟು ಬೇರೆ ದಿನಾಂಕಗಳಿಗೆ ಸಂಬಂಧಿಸಿದ ಆರ್ಡರ್–ಶೀಟ್‌ನ್ನು ನ್ಯಾಯಾಲಯದಿಂದ ಪಡೆದು ಸಲ್ಲಿಸಿರುತ್ತಾರೆ. ಸದರಿ ಪ್ರಕರಣಗಳಿಗೆ ಸಂಬಂಧಿಸಿದಂತೆ, ಮೈಸೂರು ಅಭಿಯೋಗ ಉಪನಿರ್ದೇಶಕರು ಸಹ ಆಪಾದಿತ ಸರ್ಕಾರಿ ನೌಕರರಿಗೆ ಸ್ಪಷ್ಟವಾಗಿ ಸೂಚಿಸಿದ್ದರೂ ಇವರನ್ನು ತಪ್ಪು ದಾರಿಗೆ ಎಳೆಯುವ ಉದ್ದೇಶ ಇಟ್ಟುಕೊಂಡು ತಿಳಿಸಿದ ದಿನಾಂಕಗಳ ಆರ್ಡರ್ ಶೀಟನ್ನು ಹೊರತು ಪಡಿಸಿ ಬೇರೆ ದಿನಾಂಕಗಳ ಆರ್ಡರ್–ಶೀಟ್‌ಗಳನ್ನು ಸಲ್ಲಿಸಿರುತ್ತಾರೆ. ಸದರಿ ಪ್ರಕರಣಗಳ ಆರ್ಡರ್–ಶೀಟ್‌ಗಳನ್ನು ನ್ಯಾಯಾಲಯದಿಂದ ಪಡೆಯಲು ಅಭಿಯೋಗ ಉಪನಿರ್ದೇಶಕರು, ಮೈಸೂರು ವಿಭಾಗ, ಮೈಸೂರು ಇವರು ಆಪಾಧಿತ ಸರ್ಕಾರಿ ಅಧಿಕಾರಿಗಳ ದಿನಾಂಕ 7.9.2001 ರಂದು ಅರ್ಜಿಯನ್ನು ಸಲ್ಲಿಸಿದ್ದು, ಸದರಿ ಅರ್ಜಿಗಳನ್ನು ಆಪಾಧಿತ ಸರ್ಕಾರಿ ನೌಕರರು "ನಾಟ್ ಪ್ರೆಸ್ಡ್" ಎಂದು ನಮೂದಿಸಿ ಸದರಿ ಅರ್ಜಿಗಳನ್ನು ನ್ಯಾಯಾಲಯದಿಂದ ವಾಪಸ್ಸು ಪಡೆದಿರುತ್ತಾರೆ. ಆಪಾಧಿತ ಸರ್ಕಾರಿ ನೌಕರರು ಒಬ್ಬ ಜವಾಬ್ದಾರಿಯುತ ಕಾನೂನು

ಅಧಿಕಾರಿಯಾಗಿದ್ದು, ಮೇಲಾಧಿಕಾರಿಗಳ ಆದೇಶವನ್ನು ಸರಿಯಾಗಿ ಪಾಲಿಸದೇ ಅಭಿಯೋಗ ಉಪನಿರ್ದೇಶಕರು, ಮೈಸೂರು, ಅವರ ಪತ್ರ ವ್ಯವಹಾರಗಳಿಗೆ ನಿಗಧಿತ ವೇಳೆಯಲ್ಲಿ ಸ್ಪಂದಿಸಿ ವಿವರಗಳನ್ನು ಸಲ್ಲಿಸದೇ ಕರ್ತವ್ಯದಲ್ಲಿ ಲೋಪವನ್ನೆಸಗಿ ಸರ್ಕಾರಿ ನೌಕರರಿಗೆ ತಕ್ಕುದಲ್ಲದ ರೀತಿಯಲ್ಲಿ ನಡೆದುಕೊಂಡು ದುರ್ನಡತೆಯನ್ನು ಎಸಗಿರುತ್ತಾರೆ.

**ಆರೋಪ–2:**

ಆಪಾಧಿತ ಸರ್ಕಾರಿ ನೌಕರರಾದ ಶ್ರೀ ಬಿ.ಶಶಿಧರ, ಸಹಾಯಕ ಸರ್ಕಾರಿ ಅಭಿಯೋಜಕರಿಗೆ ಮುಖ್ಯ ಕಛೇರಿಯಿಂದ ದಿನಾಂಕ 29.11.2001 ರಂದು ನೀಡಿದ್ದ ಮೆಮೊಗೆ ಲಿಖಿತ ಸಮಜಾಯಿಷಿಯನ್ನು ಸಲ್ಲಿಸುವಂತೆ ದಿನಾಂಕ 5.3.2002 ರಂದು ನೆನಪೋಲೆ ಬರೆಯಲಾಗಿದ್ದರೂ ಈ ಕುರಿತು ಆಪಾಧಿತ ಸರ್ಕಾರಿ ನೌಕರರು 10 ದಿನಗಳ ಕಾಲಾವಕಾಶವನ್ನು ಕೋರಿದ್ದು, ಮುಖ್ಯ ಕಛೇರಿಯಿಂದ ಆಪಾಧಿತ ಸರ್ಕಾರಿ ನೌಕರರಿಗೆ ದಿನಾಂಕ 6.5.2002 ರಂದು ಒಂದು ಪತ್ರವನ್ನು ಮತ್ತು ದಿನಾಂಕ 11.7.2002 ರಂದು ಒಂದು ಕಾರಣ ಕೇಳುವ ಸೂಚನಾ ಪತ್ರವನ್ನು ನೊಂದಾಯಿತ ಅಂಚೆ ಸ್ವೀಕೃತಿ ಬಾಕಿ ಮುಖಾಂತರ ಕಳುಹಿಸದ್ದರೂ, ಆಪಾಧಿತ ಸರ್ಕಾರಿ ನೌಕರರು ವಿವರಣೆಯನ್ನು ಸಲ್ಲಿಸಿರುವುದಿಲ್ಲವೆಂದೂ, ಮುಖ್ಯ ಕಛೇರಿಯಿಂದ ಮೆಮೋ ಮೂಲಕ ತಿಳಿಸಿದ ಎಲ್ಲಾ ಪ್ರಕರಣಗಳ ಆರ್ಡರ್–ಶೀಟ್‌ಗಳನ್ನು ಕಳುಹಿಸದೆ ಅಪಾಧಿತ ಸರ್ಕಾರಿ ನೌಕರರು ಮೇಲಾಧಿಕಾರಿಗಳ ಆದೇಶವನ್ನು ಸ್ಪಷ್ಟವಾಗಿ ಉಲ್ಲಂಘಿಸಿ ಅವರಿಗೆ ತಕ್ಕುದಲ್ಲದ ರೀತಿಯಲ್ಲಿ ನಡೆದುಕೊಂಡು ದುರ್ನಡತೆ ಎಸಗಿರುತ್ತಾರೆ.

**ಆರೋಪ–3**

ಶ್ರೀ ಬಿ.ಶಶಿಧರ, ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಒಬ್ಬ ಜವಾಬ್ದಾರಿಯುತ ಕಾನೂನು ಅಧಿಕಾರಿಯಾಗಿದ್ದು, ಕೃಷ್ಣರಾಜಪೇಟೆ ನ್ಯಾಯಾಲಯದ ಕೆಲಸ ಕಾರ್ಯಗಳನ್ನು ನಿರ್ವಹಿಸಲು, ಅನೇಕ ಸಂದರ್ಭಗಳಲ್ಲಿ ನ್ಯಾಯಾಲಯಕ್ಕೆ ಸರಿಯಾದ ಸಮಯಕ್ಕೆ ಹಾಜರಾಗದೆ ತಡವಾಗಿ ಹಾಜರಾಗುತ್ತಿದ್ದುದ್ದಲ್ಲದೆ ಆಪಾಧಿತ ಸರ್ಕಾರಿ ನೌಕರರು ಕೆಲವು ವಕೀಲರುಗಳೊಡನೆ ಸೇರಿ ನ್ಯಾಯಾಲಯದ ಕೆಲಸ ಕಾರ್ಯಗಳಿಗೆ ಅಡಚಣೆ ಉಂಟು ಮಾಡಿ ಆಪಾಧಿತ ಸರ್ಕಾರಿ ನೌಕರರು ಅವರಿಗೆ ತಕ್ಕುದಲ್ಲದ ರೀತಿಯಲ್ಲಿ ನಡೆದುಕೊಂಡು ಕರ್ತವ್ಯ ಲೋಪವೆಸಗಿರುತ್ತಾರೆ.

**ಆರೋಪ–4**

ಆಪಾಧಿತ ಸರ್ಕಾರಿ ನೌಕರರಾದ ಶ್ರೀ ಬಿ.ಶಶಿಧರ ಸಹಾಯಕ ಸರ್ಕಾರಿ ಅಭಿಯೋಜಕರು, ಕೃಷ್ಣರಾಜಪೇಟೆ, ಇವರಿಗೆ, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖಾ ನಿರ್ದೇಶಕರ ಕಛೇರಿಯಿಂದ ದಿನಾಂಕ 6.3.2002 ರಂದು ಒಂದು ಮೆಮೋ ನೀಡಿ ಜೆ.ಎಂ.ಎಫ್.ಸಿ ನ್ಯಾಯಾಲಯದ ಸಿ.ಸಿ.ನಂ.206:98ರ ಪ್ರಕರಣದ ನಿರ್ವಹಣೆಯಲ್ಲಿ ಅವರು ಎಸಗಿದ ಕರ್ತವ್ಯ ಲೋಪಗಳಿಗೆ ಸಂಬಂಧಿಸಿದಂತೆ ಮೆಮೊ ತಲುಪಿದ ಒಂದು ವಾರದೊಳಗೆ ವಿವರಣೆ ಸಲ್ಲಿಸುವಂತೆ ತಿಳಿಸಿದ್ದರೂ ಆಪಾಧಿತ ಸರ್ಕಾರಿ ನೌಕರರು ನಿಗಧಿತ ಅವಧಿಯೊಳಗೆ ವಿವರಣೆ ಸಲ್ಲಿಸದೇ ಇದ್ದ ಕಾರಣ ದಿನಾಂಕ 17.4.2002 ಮತ್ತು 9.5.2002 ರಂದು ಆಪಾಧಿತ ಸರ್ಕಾರಿ ನೌಕರರಿಗೆ ಎರಡು ನೆನಪೋಲೆಗಳನ್ನು ಬರೆದ ನಂತರ, ಮೆಮೋ ನೀಡಿದ ಎರಡೂವರೆ ತಿಂಗಳುಗಳ ನಂತರ ದಿನಾಂಕ 20.5.2002 ರಂದು ವಿವರಣೆ ಸಲ್ಲಿಸಿರುತ್ತಾರೆಂದೂ, ಅಲ್ಲದೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖಾ ನಿರ್ದೇಶಕರ ಕಛೇರಿಯಿಂದ ದಿನಾಂಕ 21.6.2002 ರಂದು ಆಪಾಧಿತ ಸರ್ಕಾರಿ ನೌಕರರು ಮತ್ತೊಂದು ವಿವರಣೆಯನ್ನು ಸಲ್ಲಿಸಿರುತ್ತಾರೆಂದೂ, ಸದರಿ ವಿವರಣೆಯಲ್ಲಿ ಆಪಾಧಿತ ಸರ್ಕಾರಿ ನೌಕರರು ಸಿ.ಸಿ.ನಂ.206:98ರ ಪ್ರಕರಣದ ನಿರ್ವಹಣೆಯಲ್ಲಿ ಸಾಕ್ಷಿಗಳ ಹಾಜರಾತಿ ಹಾಗೂ ಪ್ರಕರಣದಲ್ಲಿ ವಶಪಡಿಸಿಕೊಳ್ಳಲಾದ ಮುದ್ದೇಮಾಲುಗಳ ಹಾಜರಾತಿ ಕುರಿತಂತೆ ತೆಗೆದುಕೊಂಡ ಕ್ರಮಗಳ ಬಗ್ಗೆ ಯಾವದೇ ದಾಖಲಾತಿಗಳನ್ನು ಒದಗಿಸಿಲ್ಲವೆಂದೂ, ಆಪಾಧಿತ ಸರ್ಕಾರಿ ನೌಕರರು ಒಬ್ಬ ಜವಾಬ್ದರಿಯುತ ಕಾನೂನು ಅಧಿಕಾರಿಯಾಗಿದ್ದು, ಮೇಲಾಧಿಕಾರಿಗಳ ಆದೇಶದಂತೆ ನಿಗಧಿತ ಅವಧಿಯೊಳಗೆ ವಿವರಣೆ ಸಲ್ಲಿಸದೆ ಪ್ರಕರಣದ ನಿರ್ವಹಣೆಯ ಬಗ್ಗೆ ದಾಖಲಾತಿಗಳನ್ನು ಒದಗಿಸದೆ ಕರ್ತವ್ಯ ನಿರ್ವಹಣೆಯಲ್ಲಿ ಲೋಪವನ್ನೆಸಗಿ ಮೇಲಾಧಿಕಾರಿಗಳ ಆದೇಶವನ್ನು ಸ್ಪಷ್ಟವಾಗಿ ಉಲ್ಲಂಘಿಸಿ ಆಪಾಧಿತ ಸರ್ಕಾರಿ ನೌಕರರು ಅವರಿಗೆ ತಕ್ಕುದ್ದಲ್ಲದ ರೀತಿಯಲ್ಲಿ ನಡೆದುಕೊಂಡು ದುರ್ನಡತೆ ಎಸಗಿರುತ್ತಾರೆಂದು ಇರುತ್ತದೆ.

ಆರೋಪಿತ ಸರ್ಕಾರಿ ಅಧಿಕಾರಿಗೆ ಸದರಿ ಕಾರಣ ಕೇಳುವ ನೋಟೀಸು ಜಾರಿಯಾಗಿದ್ದರು, ಆರೋಪಿತ ಸರ್ಕಾರಿ ಅಧಿಕಾರಿಯು ವಿವರಣೆಯನ್ನು ಸಲ್ಲಿಸಿರುವುದಿಲ್ಲ. ಆದ ಕಾರಣ ಸದರಿ ಅಧಿಕಾರಿಯ ವಿರುದ್ಧ ಮಾಡಲಾಗಿರುವ ಆರೋಪಗಳ ಬಗ್ಗೆ ಸತ್ಯಾಸತ್ಯತೆ ತಿಳಿಯಲು ಮೇಲೆ (3)ರಲ್ಲಿ ಓದಲಾಗಿರುವ 24.6.2003ರ ಸರ್ಕಾರಿ ಆದೇಶದಲ್ಲಿ ವಿಚಾರಣಾಧಿಕಾರಿಯನ್ನು ಮತ್ತು ಮಂಡನಾಧಿಕಾರಿಯನ್ನು ನೇಮಿಸಿ ಆದೇಶವನ್ನು ಹೊರಡಿಸಲಾಗಿದೆ. ಇಲಾಖಾ ವಿಚಾರಣೆಯಲ್ಲಿ ಶಿಸ್ತು ಪ್ರಾಧಿಕಾರಿಯ ಪರವಾಗಿ 53 ದಾಖಲೆಗಳನ್ನು(Ex.p–1 ರಿಂದ p–53)ದಾಖಲೆಗಳನ್ನು ಪ್ರದರ್ಶಿತ ದಾಖಲೆಗಳಾಗಿ ಗುರ್ತಿಸಲಾಗಿದೆ ಮತ್ತು 4 ಸಾಕ್ಷಿಗಳನ್ನು ವಿಚಾರಣೆ ಮಾಡಲಾಗಿದೆ. ಆರೋಪಿತ ಅಧಿಕಾರಿಯು 23 ದಾಖಲೆಗಳನ್ನು(Ex.D–1 ರಿಂದ D–23) ಗುರ್ತಿಸಿರುತ್ತಾರೆ, ತಮ್ಮ ಪರವಾಗಿ ಯಾವುದೇ ಸಾಕ್ಷಿಗಳನ್ನು ವಿಚಾರಣೆ ಮಾಡಿರುವುದಿಲ್ಲ. ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11ರಲ್ಲಿ ಸೂಚಿಸಿರುವ ಕಾರ್ಯ ವಿಧಾನಗಳನ್ನು ಪಾಲಿಸಿ ಇಲಾಖಾ ವಿಚಾರಣಾ ವರದಿಯನ್ನು ವಿಚಾರಣಾಧಿಕಾರಿಯವರು ಸಲ್ಲಿಸಿರುತ್ತಾರೆ ಮತ್ತು ಆರೋಪಿತ ಸರ್ಕಾರಿ ಅಧಿಕಾರಿಯ ವಿರುದ್ಧ ಮಾಡಲಾಗಿರುವ ಆರೋಪ 1,2 ಮತ್ತು ಆರೋಪ 4 ಆರೋಪ ಗಳು ರುಜುವಾತಾಗಿರುತ್ತವೆಂದು ಮತ್ತು ಆರೋಪ–3 ರುಜುವಾತಾಗಿರುವುದಿಲ್ಲವೆಂದು ನಿಷ್ಕರ್ಷೆ ನೀಡಿರುತ್ತಾರೆ. ಮೇಲೆ (7)ರಲ್ಲಿ ಓದಲಾಗಿರುವ ದಿನಾಂಕ 21.4.2006ರ ಪತ್ರದಲ್ಲಿ ಅಭಿಯೋಗ ನಿರ್ದೇಶಕರು ಸದರಿ ಪ್ರಕರಣದಲ್ಲಿ ತಾವು ಒಬ್ಬ ಸಾಕ್ಷಿದಾರರಾಗಿರುವುದರಿಂದ ದಂಡನೆ ಆದೇಶವನ್ನು ಹೊರಡಿಸಲು ನ್ಯಾಯದ ದೃಷ್ಟಿಯಿಂದ ಸೂಕ್ತವಾಗ ಲಾರದು, ಇಲಾಖಾ ವಿಚಾರಣೆಯನ್ನು ಮತ್ತು ಆರೋಪಿತ ಸರ್ಕಾರಿ ಅಧಿಕಾರಿಯು 2ನೇ ಕಾರಣ ಕೇಳುವ ನೋಟೀಸಿಗೆ ನೀಡಿರುವ ಉತ್ತರವನ್ನು

ಪರಿಶೀಲಿಸಿ ಆದೇಶವನ್ನು ಸರ್ಕಾರದಿಂದಲೇ ಹೊರಡಿಸುವಂತೆ ಕೋರಿರುತ್ತಾರೆ. ಆರೋಪಿತ ಅಧಿಕಾರಿಯು 2ನೇ ಕಾರಣ ಕೇಳುವ ನೋಟೀಸಿಗೆ ದಿನಾಂಕ 29.12.2005ರಂದು ಉತ್ತರಿಸಿರುತ್ತಾರೆ. ಸದರಿ ಆರೋಪಿತ ಸರ್ಕಾರಿ ಅಧಿಕಾರಿಯು 2ನೇ ಕಾರಣ ಕೇಳುವ ನೋಟೀಸಿಗೆ ನೀಡಿರುವ ಉತ್ತರವನ್ನು ನೀಡಿ ಎಲ್ಲಾ ಆರೋಪಗಳಿಂದ ಮುಕ್ತಗೊಳಿಸಬೇಕೆಂದು ಸಲ್ಲಿಸಿರುವ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ.

**ಆರೋಪ 1:–**

ಆರೋಪಕ್ಕೆ ಸಂಬಂಧಿಸಿದಂತೆ ಕೆಲವು ಹಂತಗಳಲ್ಲಿ ಸಿ.ಸಿ.ಸಂಖ್ಯೆಗಳು ಮತ್ತು ದಿನಾಂಕಗಳು ನಮೂದಿಸುವಲ್ಲಿ ತುಸು ಗೊಂದಲವಾಗಿರುವುದು ಗೋಚರಿಸಿದರೂ ಮೇಲಾಧಿಕಾರಿಗಳು ಯಾವುದೇ ನಿರ್ದಿಷ್ಟ ಸೂಚನೆಗಳನ್ನು ನೀಡಿದಾಗ ಸೂಚನೆ ಬಗ್ಗೆ ಕೂಡಲೆ ಸ್ಪಷ್ಟಪಡಿಸಿಕೊಂಡು ದಾಖಲೆಗಳನ್ನು ಒದಗಿಸುವಲ್ಲಿ ಆರೋಪಿತ ಅಧಿಕಾರಿಯು ವಿಫಲರಾಗಿರುತ್ತಾರೆ. ಆದ ಕಾರಣ ಮೊದಲನೇ ಆರೋಪವು ಸಾಬೀತಾಗಿರುತ್ತದೆ.

**ಆರೋಪ 2:–**

ಮುಖ್ಯ ಕಛೇರಿಯಿಂದ ದಿನಾಂಕ 29.11.2001ರಂದು ನೀಡಿದ್ದ ಮೆಮೊಗೆ ಲಿಖಿತ ಸಮಜಾಯಿಷಿ ಸಲ್ಲಿಸುವಂತೆ ದಿನಾಂಕ 5.3.2002, 6.5.2002 ಮತ್ತು 11.7.2002ರ ಕಾರಣ ಕೇಳುವ ನೋಟೀಸು ಕಳುಹಿಸಿದ್ದರೂ ಆಪಾಧಿತ ಸರ್ಕಾರಿ ನೌಕರರು ವಿವರಣೆ ಸಲ್ಲಿಸಿರುವುದಿಲ್ಲ ಮತ್ತು ಮುಖ್ಯ ಕಛೇರಿಯಿಂದ ಮೆಮೊ ಮೂಲಕ ತಿಳಿಸಿದ ಎಲ್ಲಾ ಪ್ರಕರಣಗಳು ಕಳುಹಿಸದೇ ಮೇಲಾಧಿಕಾರಿಗಳ ಅದೇಶದ ಸ್ಪಷ್ಟ ಉಲ್ಲಂಘನೆಯಾಗಿರುತ್ತದೆ ಎಂಬ ಬಗ್ಗೆ ಸರ್ಕಾರಿ ಅಧಿಕಾರಿಯು ಏನನ್ನು ಹೇಳಿರುವುದಿಲ್ಲ. ಆದ ಕಾರಣ ಎರಡನೇ ಆರೋಪವು ಸಾಬೀತಾಗಿರುತ್ತದೆ.

**ಆರೋಪ 3:–**

Exp-D2,D3,D4 ಗಳನ್ನು ಪರಿಶೀಲಿಸಿದಾಗ ದಿನಾಂಕ 8.8.2001, 16.8.2001 ಮತ್ತು 4.9.2001ರಂದು ರಜಗಳನ್ನು ಯಾವ ದಿನಾಂಕದಂದು ರಜೆ ಬೇಕಾಗಿತ್ತೋ ಆ ದಿನಗಳಂದೇ ರಜೆ ಅರ್ಜಿ ಸಲ್ಲಿಸಿರುವುದು ಸ್ಪಷ್ಟವಾಗಿರುತ್ತದೆ. ಆದ ಕಾರಣ ಅಧಿಕಾರಿಯು ನ್ಯಾಯಾಲಯಕ್ಕೆ ಗೈರುಹಾಜರಾಗಿರುತ್ತಾರೆ ಮತ್ತು ತಡವಾಗಿ ಹಾಜರಾಗಿರುತ್ತಾರೆ ಎಂಬುದು ಸ್ಪಷ್ಟವಾಗಿರುತ್ತದೆ. ಆದ ಕಾರಣ ಮೂರನೇ ಭಾಗಶ: ಆರೋಪವು ಸಾಭೀತಾಗಿರುತ್ತದೆ.

**ಆರೋಪ 4:–**

ಆಪಾಧಿತ ಸರ್ಕಾರಿ ಅಧಿಕಾರಿ ನೀಡಿರುವ ಕಾರಣಗಳನ್ನು ಒಪ್ಪಬಹುದಾಗಿದ್ದರೂ ಮೇಲಾಧಿಕಾರಿಯು ಕೋರಿರುವ ವಿವರಣೆಯನ್ನು ನಿಗಧಿತ ಅವಧಿಯಲ್ಲಿ ಸಲ್ಲಿಸದಿರುವುದು ಸ್ಪಷ್ಟಪಡುತ್ತದೆ. ಈ ಮೇಲಿನ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡ ಅದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ನಂ. ಒಇ 792 ಪಿಪಿಇ 2005, ಬೆಂಗಳೂರು, ದಿನಾಂಕ: 27ನೇ ಡಿಸೆಂಬರ್ 2006**

ಶ್ರೀ ಬಿ.ಶಶಿಧರ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ(ಕಿವಿ) ಜೆಎಂಎಫ್‌ಸಿ ನ್ಯಾಯಾಲಯ, ಕೆ.ಆರ್.ಪೇಟೆ, ಮಂಡ್ಯ ಜಿಲ್ಲೆ ಇವರು ಕರ್ತವ್ಯ ನಿರ್ಲಕ್ಷೆ ಮಾಡಿರುತ್ತಾರೆಂದು ಮಾಡಲಾಗಿರುವ 4 (ನಾಲ್ಕು) ಆರೋಪಗಳು ಸಾಬೀತಾಗಿರುವುದರಿಂದ, ಸದರಿ ಆರೋಪಿತ ಅಧಿಕಾರಿಯವರಿಗೆ ಕರ್ನಾಟಕ ಸರ್ಕಾರಿ ಸೇವಾ ನಿಯಮ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 8(ಈ) ರಂತೆ ರೂ.6,000–11,200ರಲ್ಲಿನ ಕಾಲಿಕ ವೇತನ ಶ್ರೇಣಿಯಲ್ಲಿ ಅವರು ಪಡೆಯುತ್ತಿರುವ ರೂ 8,800/–ರಿಂದ ರೂ.8,600/ಕ್ಕೆ ಕೆಳಗಿನ ಹಂತಕ್ಕೆ ಕೂಡಲೆ ಜಾರಿಗೆ ಬರುವಂತೆ ದಿನಾಂಕ 28.2.2007ರವರೆಗೆ ಇಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ.

**ಆರ್. ನಿಸಾರ್ ಅಹಮದ್**

ಪಿ.ಆರ್. 26

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ. ಮತ್ತು ಸು. ಮತ್ತು ಅಭಿಯೋಗಗಳು)

**ಒಳಾಡಳಿತ ಸಚಿವಾಲಯ**

**ವಿಷಯ:** 7(ಏಳು) ನೂತನ ಜಿಲ್ಲೆಗಳಲ್ಲಿ ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆಯ ಕಾರ್ಯಾಲಯಗಳನ್ನು ತೆರೆಯುವ ಬಗ್ಗೆ.

**ಓದಲಾಗಿದೆ:** ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆಯ ನಿರ್ದೇಶಕರ ಪತ್ರ ಸಂಖ್ಯೆ: ಸೈಕಪುಇ/ಸಿಬ್ಬಂದಿ/7 ಹೊಸ/2004, ದಿನಾಂಕ: 16–1–2004 ಮತ್ತು 8–9–2005.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆಯು ಒಂದು ವಿಶಿಷ್ಟ ಸಂಸ್ಥೆಯಾಗಿದ್ದು, ಇದರ ರಚನೆ, ಕೆಲಸ ಕಾರ್ಯಗಳು, ಇಂದಿನ ಅಗತ್ಯತೆಗೆ ಅನುಗುಣವಾಗಿ ಹೊಸ ಕಾರ್ಯಾಲಯಗಳು ಮತ್ತು ಶಾಖೆಗಳನ್ನು ತೆರೆಯುವ ಕುರಿತಂತೆ ಮುಂದಿನಂತೆ ವಿವರಿಸಿರುತ್ತಾರೆ.

ಈ ಇಲಾಖೆಯ ಎಲ್ಲಾ ಹುದ್ದೆಗಳು ಮಾಜಿ ಸೈನಿಕರಿಂದ ತುಂಬಲ್ಪಟ್ಟು, ಕೇಂದ್ರ ಸರ್ಕಾರವು ಸಿಬ್ಬಂದಿ ಹಾಗೂ ಇತರ ಎಲ್ಲಾ ವೆಚ್ಚಗಳ ಶೇಕಡಾ 50 ರಷ್ಟನ್ನು ರಾಜ್ಯ ಸರ್ಕಾರಕ್ಕೆ ಮರು ಪಾವತಿ ಮಾಡುತ್ತದೆ. ಕೇಂದ್ರ ಸರ್ಕಾರವು ಈ ಇಲಾಖೆಯ ಕಾರ್ಯ ವೈಖರಿ ಕಲ್ಯಾಣ ಕಾರ್ಯಕ್ರಮಗಳು ಹಾಗೂ ಇತರ ವಿಷಯಗಳಿಗೆ ಸಂಬಂಧಿಸಿದ ರೂಪುರೇಷಗಳನ್ನು ಕಾಲ ಕಾಲಕ್ಕೆ ಪರಿವೀಕ್ಷಿಸುತ್ತದೆ. ಅಲ್ಲದೆ, ಇಲಾಖೆಯು ಕೇಂದ್ರ ಸರ್ಕಾರದ ರಕ್ಷಣಾ ಮಂತ್ರಾಲಯದ ಪುನರ್ವಸತಿ ಮಹಾ ನಿರ್ದೇಶಕರ ನೇರ

ಕಾರ್ಯಾತ್ಮಕ ನೀತಿ ನಿಯಮಗಳನ್ನು ಪಾಲಿಸಬೇಕಾಗುತ್ತದೆ. ಆದುದರಿಂದ ರಾಜ್ಯದ ಇತರ ಯಾವುದೇ ಇಲಾಖೆಗಳಿಗಿಂತ ವಿಭಿನ್ನ ಕಾರ್ಯಕ್ಷೇತ್ರವನ್ನು ಈ ಇಲಾಖೆಯು ಹೊಂದಿದೆ. ಇದಲ್ಲದೆ ಈ ಇಲಾಖೆಯು ಸೈನಿಕರ, ಮಾಜಿ ಸೈನಿಕರ ಮತ್ತು ಅವರ ಅವಲಂಬಿತರ ಕಲ್ಯಾಣ ಮತ್ತು ಪುನರ್ವಸತಿ ಕಾರ್ಯನೋಡಿಕೊಳ್ಳುತ್ತಿರುವುದಲ್ಲದೆ, ಕೇಂದ್ರ ರಾಜ್ಯ ಸರ್ಕಾರಗಳು ಹೊಸದಾಗಿ ಜಾರಿಗೊಳಿಸುವ ಯೋಜನೆಗಳನ್ನು ಅನುಷ್ಠಾನಕ್ಕೆ ತರುವುದು, ಮಾಜಿ ಸೈನಿಕರು ಮತ್ತು ಅವರ ಅವಲಂಬಿತರಿಗೆ ಹೆಚ್ಚಿನ ಸೌಲಭ್ಯವನ್ನು ಒದಗಿಸಲು ರಾಜ್ಯ ಸರ್ಕಾರಕ್ಕೆ ಕಾರ್ಯಯೋಜನೆ ಬಗ್ಗೆ ಸಲಹೆ ನೀಡುವುದಲ್ಲದೆ, ಅನುಷ್ಠಾನಕ್ಕೆ ತರುವುದರಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಅಲ್ಲದೆ ರಾಜ್ಯದ 3 ಲಕ್ಷಕ್ಕೂ ಮೀರಿದ ಮಾಜಿ ಸೈನಿಕರ ಕುಟುಂಬಗಳ ಕಲ್ಯಾಣ ಮತ್ತು ಪುನರ್ವಸತಿಯೂ ಈ ಇಲಾಖೆಯ ಗುರುತರ ಜವಾಬ್ದಾರಿಯಾಗಿದೆ. ಈ ಇಲಾಖೆಯನ್ನು ರಾಜ್ಯದಲ್ಲಿನ ಇತರ ಇಲಾಖೆಗಳಿಗೆ ಹೋಲಿಸಿದಾಗ ಕೇವಲ 129 ಕ್ಕಿಂತ ಕಡಿಮೆ ಸಿಬ್ಬಂದಿವುಳ್ಳ ಸಣ್ಣ ವಿಭಾಗವಾಗಿದ್ದು, ಈ ನಿಟ್ಟಿನಲ್ಲಿ ರಾಜ್ಯದಲ್ಲಿ ಪ್ರಸ್ತುತ 11 ಜಿಲ್ಲಾ ಕಾರ್ಯಾಲಯಗಳು ಹಾಗೂ ನಿರ್ದೇಶನಾಲಯಗಳೂ ಸೇರಿದಂತೆ, 12 ಘಟಕಗಳಲ್ಲಿರುವ ಈಗಿರುವ 88 ಅಧಿಕಾರಿ/ಸಿಬ್ಬಂದಿ ವರ್ಗದವರಿಂದ, 27 ಜಿಲ್ಲೆಗಳಲ್ಲಿರುವ ಸೇವಾ ನಿರತ ಸೈನಿಕರ, ಮಾಜಿ ಸೈನಿಕರ ಮತ್ತು ಅವರ ಅವಲಂಬಿತರ ಕಲ್ಯಾಣ ಮತ್ತು ಪುನರ್ವಸತಿ ಕಾರ್ಯಗಳನ್ನು ತ್ವರಿತವಾಗಿ ಮತ್ತು ಸುಸೂತ್ರವಾಗಿ ನಡೆಸಲು ಸಾಧ್ಯವಾಗುತ್ತಿಲ್ಲ. ಇದರಿಂದ ಕಾರ್ಯಯೋಜನೆಗಳು ಸ್ಥಗಿತಗೊಂಡು ವಿಳಂಬಕ್ಕೆ ಅವಕಾಶ ಉಂಟಾಗಿ ಸೌಲಭ್ಯಗಳನ್ನು ಶೀಘ್ರವಾಗಿ ಪಡೆಯುವಲ್ಲಿ ಸೇವಾ ನಿರತ ಸೈನಿಕರು, ಮಾಜಿ ಸೈನಿಕರು ಮತ್ತು ಅವರ ಅವಲಂಬಿತರು ವಂಚಿತರಾಗುತ್ತಿದ್ದಾರೆ. ಉದಾಹರಣೆಗೆ ಇಲಾಖೆಯಿಂದ ಸರ್ಕಾರದ ಯೋಜನೆಗಳ ಲಾಭ ಪಡೆಯಲು ಕೊಪ್ಪಳ, ಬೀದರ ಹಾಗೂ ರಾಯಚೂರು ಜಿಲ್ಲೆಯ ಮಾಜಿ ಸೈನಿಕರ ಮತ್ತು ಅವರ ಅವಲಂಬಿತರು ಗುಲ್ಬರ್ಗಾ ವರೆಗೆ, ಬಳ್ಳಾರಿ ಜಿಲ್ಲೆಯವರು ಧಾರವಾಡದ ವರೆಗೆ, ಹಾಸನದವರು ಮಡಿಕೇರಿಯ ವರೆಗೆ, ಬೆಳಗಾವಿ ಜಿಲ್ಲೆಯ ಅಥಣಿ (ಮಹಾರಾಷ್ಟ್ರ ರಾಜ್ಯದ ಗಡಿ ಭಾಗಕ್ಕೆ ಹೊಂದಿಕೊಂಡಿರುವ) ತಾಲೂಕಿನವರು ಬೆಳಗಾವಿ ಕೇಂದ್ರ ಸ್ಥಾನದ ವರೆಗೆ ಮತ್ತು ದಾವಣಗೆರೆ ಹಾಗೂ ಚಿತ್ರದುರ್ಗದವರು ಶಿವಮೊಗ್ಗದ ವರೆಗೆ ಪ್ರಯಾಣಿಸಬೇಕಾಗುತ್ತದೆ. ಇದರಿಂದ ಅವರಿಗೆ ಸಮಯ ಹಾಗೂ ಆರ್ಥಿಕ ನಷ್ಟ ಉಂಟಾಗುತ್ತದೆ. ಇಲಾಖೆಯಲ್ಲಿ ಅಧಿಕಾರಿ/ಸಿಬ್ಬಂದಿಗಳ ಕೊರತೆ ಇರುವುದರಿಂದ ದೂರದ ಸ್ಥಳಗಳ ಮಾಜಿ ಸೈನಿಕರು ಮತ್ತು ಅವರ ಅವಲಂಬಿತರು ತಮ್ಮ ತೊಂದರೆಗಳನ್ನು ಬಗೆಹರಿಸಿಕೊಳ್ಳಲು ಬಹಳ ದಿನಗಳು ಕಾಯಬೇಕಾಗುತ್ತದೆ.

ಪ್ರಸ್ತುತ ಇಲಾಖೆಯಲ್ಲಿ 11 ಜಿಲ್ಲಾ ಕಾರ್ಯಾಲಯಗಳಿದ್ದು, ಅವು 27 ಜಿಲ್ಲೆಗಳ ಕಾರ್ಯಭಾರ-ವನ್ನು ನಡೆಸುತ್ತಿವೆ. ಅದರ ವಿವರಗಳು ಈ ಕೆಳಗಿನಂತಿವೆ:-

| ಕ್ರ.ಸಂ. | ಜಿಲ್ಲಾ ಕಾರ್ಯಾಲಯಗಳು | ಕಾರ್ಯವ್ಯಾಪ್ತಿ ಜಿಲ್ಲೆಗಳು |
|---|---|---|
| 1 | ಬೆಂಗಳೂರು ನಗರ | ಬೆಂಗಳೂರು ನಗರ |
| 2 | ಬೆಂಗಳೂರು ಗ್ರಾಮಾಂತರ | ಬೆಂಗಳೂರು ಗ್ರಾಮಾಂತರ ತುಮಕೂರು ಮತ್ತು ಕೋಲಾರ |
| 3 | ಮೈಸೂರು | ಮೈಸೂರು, ಮಂಡ್ಯ ಮತ್ತು ಚಾಮರಾಜನಗರ |
| 4 | ಮಡಿಕೇರಿ | ಕೊಡಗು ಮತ್ತು ಹಾಸನ |
| 5 | ಮಂಗಳೂರು (ದ.ಕ) | ದಕ್ಷಿಣ ಕನ್ನಡ ಮತ್ತು ಉಡುಪಿ |
| 6 | ಕಾರವಾರ (ಉ.ಕ) | ಉತ್ತರ ಕನ್ನಡ |
| 7 | ಶಿವಮೊಗ್ಗ | ಶಿವಮೊಗ್ಗ, ಚಿಕ್ಕಮಗಳೂರು, ಚಿತ್ರದುರ್ಗ ಮತ್ತು ದಾವಣಗೆರೆ |
| 8 | ಧಾರವಾಡ | ಧಾರವಾಡ, ಹಾವೇರಿ, ಗದಗ ಮತ್ತು ಬಳ್ಳಾರಿ |
| 9 | ಬೆಳಗಾವಿ | ಬೆಳಗಾವಿ |
| 10 | ವಿಜಾಪೂರ | ವಿಜಾಪೂರ ಮತ್ತು ಬಾಗಲಕೋಟೆ |
| 11 | ಗುಲ್ಬರ್ಗಾ, | ಗುಲ್ಬರ್ಗಾ, ಬೀದರ, ರಾಯಚೂರು ಮತ್ತು ಕೊಪ್ಪಳ |

ಮಾಜಿ ಸೈನಿಕರು ಮತ್ತು ಅವರ ಅವಲಂಬಿತರು ದೂರದ ಸ್ಥಳಗಳಿಂದ ಅವರ ಕಾರ್ಯವ್ಯಾಪ್ತಿಯ ಜಿಲ್ಲಾ ಸೈನಿಕ ಕಲ್ಯಾಣ ಕಾರ್ಯಾಲಯಕ್ಕೆ ಪ್ರಯಾಣಿಸಲು ವ್ಯರ್ಥವಾಗುವ ಸಮಯವನ್ನು ಉಳಿಸಲು ಮತ್ತು ಹಾಲಿ ಜಿಲ್ಲಾ ಕಾರ್ಯಾಲಯಗಳ ಮೇಲಿರುವ ಕೆಲಸದ ಒತ್ತಡವನ್ನು ಕಡಿಮೆ ಮಾಡುವ ದೃಷ್ಟಿಯಿಂದ, ಈ ಕೆಳಗಿನಂತೆ ಹೊಸದಾಗಿ 3 (ಮೂರು) ಇಲಾಖೆಯ ಕಾರ್ಯಾಲಯಗಳನ್ನು ಮತ್ತು ಉಳಿದ 6 (ಆರು) ಸ್ಥಳಗಳಲ್ಲಿ ಜಿಲ್ಲಾಧಿಕಾರಿಗಳ/ ಜಿಲ್ಲಾ ಕೇಂದ್ರ ಸ್ಥಾನದ ಸಹಾಯಕರ ಅಧೀನದಲ್ಲಿ ಇಬ್ಬರು (ಒಬ್ಬ ಪ್ರಥಮ ದರ್ಜೆ ಸಹಾಯಕರು ಮತ್ತು ಒಬ್ಬ ಕಲ್ಯಾಣ ಸಂಘಟಕರು) ಸಿಬ್ಬಂದಿಗಳನ್ನೊಳಗೊಂಡ ಇಲಾಖೆಯ ಒಂದು ಶಾಖೆಯನ್ನು ತೆರೆಯಲು ಉದ್ದೇಶಿಸಲಾಗಿದ್ದು, ಅದರ ವಿವರಗಳು ಈ ಕೆಳಗಿನಂತಿವೆ.

3 (ಮೂರು) ಹೊಸ ಕಾರ್ಯಾಲಯಗಳ ವಿವರಗಳು

| ಕ್ರ.ಸಂ. | ಹೊಸ ಕಾರ್ಯಾಲಯ ತೆರೆಯಬೇಕಾದ ಸ್ಥಳ | ಕಾರ್ಯವ್ಯಾಪ್ತಿ ಜಿಲ್ಲೆಗಳು |
|---|---|---|
| (ಅ) | ಹಾಸನ | ಹಾಸನ ಮತ್ತು ಚಿಕ್ಕಮಗಳೂರು |
| (ಆ) | ಬಳ್ಳಾರಿ | ಬಳ್ಳಾರಿ ರಾಯಚೂರು ಮತ್ತು ಚಿತ್ರದುರ್ಗ |
| (ಇ) | ಬಾಗಲಕೋಟೆ | ಬಾಗಲಕೋಟೆ ಮತ್ತು ಕೊಪ್ಪಳ |

06 (ಆರು) ಇಬ್ಬರು ಸಿಬ್ಬಂದಿಗಳನ್ನೊಳಗೊಂಡ ಶಾಖೆಯ ವಿವರಗಳು

(ಅ) ತುಮಕೂರು

(ಆ) ಕೋಲಾರ

(ಇ) ಉಡುಪಿ

(ಈ) ದಾವಣಗೆರೆ

(ಉ) ಗದಗ

(ಊ) ಬೀದರ್

ಈಗ ಹೊಸದಾಗಿ 3 (ಮೂರು) ಕಾರ್ಯಾಲಯಗಳಿಗೆ ಮತ್ತು ಇಬ್ಬರು ಸಿಬ್ಬಂದಿಗಳನ್ನೊಳಗೊಂಡ 06 ಶಾಖೆಗಳನ್ನು ತೆರೆಯಲು ಬೇಕಾಗಿರುವ ಅಧಿಕಾರಿ ಮತ್ತು ಸಿಬ್ಬಂದಿಗಳ ವಿವರಗಳು ಈ ಕೆಳಗಿನಂತಿದ್ದು, ಇದಕ್ಕೆ ತಗಲುವ ವೆಚ್ಚವನ್ನು ಮೊದಲು ರಾಜ್ಯ ಸರ್ಕಾರವು ಪೂರ್ತಿಯಾಗಿ ಭರಿಸಬೇಕಾಗಿದ್ದು ನಂತರ ಈ ವೆಚ್ಚದ ಶೇಕಡ 50 ರಷ್ಟು ವೆಚ್ಚವನ್ನು ಕೇಂದ್ರ ಸರ್ಕಾರವು ಮರು ಭರಿಸುತ್ತದೆ.

| ಕ್ರ.ಸಂ. | ಹುದ್ದೆಯ ಹೆಸರು | ಬೇಕಾಗಿರುವ ಹುದ್ದೆಗಳ ಸಂಖ್ಯೆ: |
|---|---|---|
| (ಅ) | ಉಪ ನಿರ್ದೇಶಕರು | 03 |
| (ಆ) | ಕಛೇರಿ ಅಧೀಕ್ಷಕರು | 03 |
| (ಇ) | ಪ್ರಥಮ ದರ್ಜೆ ಸಹಾಯಕರು | 09 |
| (ಈ) | ದ್ವಿತಿಯ ದರ್ಜೆ ಸಹಾಯಕರು | 03 |
| (ಉ) | ಕಲ್ಯಾಣ ಸಂಘಟಿಕರು | 09 |
| (ಊ) | ದಲಾಯತರು | 03 |
| | ಒಟ್ಟು | 30 |

ಕರ್ನಾಟಕ ರಾಜ್ಯದಲ್ಲಿ ಹಾಲಿ ಇರುವ ಒಟ್ಟು 27 ಜಿಲ್ಲೆಗಳಿಗೆ ಕನಿಷ್ಟ ಪಕ್ಷ 14 ಜಿಲ್ಲಾ ಕಾರ್ಯಾಲಯ ಮತ್ತು 06 ಇಬ್ಬರು ಸಿಬ್ಬಂದಿಗಳನ್ನೊಳಗೊಂಡ 06 ಶಾಖೆಗಳಿದ್ದಲ್ಲಿ, ಆಯಾ ಜಿಲ್ಲೆಯ/ಆಯಾ ಜಿಲ್ಲೆಗೆ ಹೊಂದಿಕೊಂಡಿರುವ ಇತರ ಜಿಲ್ಲೆಯ ಮಾಜಿ ಸೈನಿಕರು ಮತ್ತು ಅವರ ಅವಲಂಬಿತರಿಗೆ ಸೈನಿಕ ಕಲ್ಯಾಣ ಕಾರ್ಯಾಲಯಗಳಿಗೆ ಭೇಟಿ ನೀಡಿ, ತಮ್ಮ ಯಾವುದೇ ಸಮಸ್ಯೆಗಳ ಕುರಿತಂತೆ ಕಾಲ ವ್ಯಯಮಾಡದೆ ಕಡಿಮೆ ವೆಚ್ಚದಲ್ಲಿ ಪರಿಹಾರ ಮತ್ತು ಸೌಲಭ್ಯಗಳನ್ನು ಪಡೆಯಲು ಅನುಕೂಲವಾಗುವುದು.

ಈ ಹಿನ್ನಲೆಯಲ್ಲಿ 3 (ಮೂರು) ಹೊಸ ಜಿಲ್ಲೆಗಳಲ್ಲಿ ಒಂದೊಂದು ಸೈನಿಕ ಕಲ್ಯಾಣ ಇಲಾಖೆಯ ಕಾರ್ಯಾಲಯಗಳನ್ನು ಮತ್ತು ಇತರ 06 (ಆರು) ಜಿಲ್ಲೆಗಳಲ್ಲಿ ಇಬ್ಬರು ಸಿಬ್ಬಂದಿಗಳನ್ನೊಳಗೊಂಡ ಒಂದೊಂದು ಶಾಖೆಯನ್ನು ತೆರೆಯುವುದು ಸೂಕ್ತ ಹಾಗೂ ಅತೀ ಅವಶ್ಯಕತೆ ಇರುವುದರಿಂದ ಈ ಪ್ರಸ್ತಾವನೆಯನ್ನು ಪರಿಗಣಿಸಿ ಸೂಕ್ತ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

ನಿರ್ದೇಶಕರು, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 67 ಕಸೈಸೇ 2006, ಬೆಂಗಳೂರು, ದಿನಾಂಕ: 30ನೇ ನವೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಕೇಂದ್ರ ಸರ್ಕಾರದ ಸಹಮತಿ ಪಡೆಯುವ ಷರತ್ತಿಗೊಳಪಟ್ಟು, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆಯಲ್ಲಿ ಮೂರು ಜಿಲ್ಲಾ ಕಛೇರಿಗಳನ್ನು ಕ್ರಮವಾಗಿ (1) ಹಾಸನ (2) ಬಳ್ಳಾರಿ ಮತ್ತು (3) ಬಾಗಲಕೋಟೆಗಳಲ್ಲಿ ಈ ಕೆಳಕಂಡ ಕಾರ್ಯವ್ಯಾಪ್ತಿ ಮತ್ತು ಹುದ್ದೆಗಳ ಸೃಜನೆಯೊಂದಿಗೆ ಸ್ಥಾಪಿಸಲು ಸರ್ಕಾರವು ಈ ಮೂಲಕ ಮಂಜೂರಾತಿಯನ್ನು ನೀಡಿದೆ.

| ಕ್ರ.ಸಂ. | ಜಿಲ್ಲಾ ಕಾರ್ಯಾಲಯ | ಕಾರ್ಯವ್ಯಾಪ್ತಿಯ ಜಿಲ್ಲೆಗಳು |
|---|---|---|
| (ಅ) | ಹಾಸನ | ಹಾಸನ ಮತ್ತು ಚಿಕ್ಕಮಗಳೂರು |
| (ಆ) | ಬಳ್ಳಾರಿ | ಬಳ್ಳಾರಿ ರಾಯಚೂರು ಮತ್ತು ಚಿತ್ರದುರ್ಗ |
| (ಇ) | ಬಾಗಲಕೋಟೆ | ಬಾಗಲಕೋಟೆ ಮತ್ತು ಕೊಪ್ಪಳ |

ಪ್ರತಿ ಕಾರ್ಯಾಲಯಕ್ಕೆ ಸೃಜನೆಯಾದ ಹುದ್ದೆಗಳ ವಿವರವು ಕೆಳಗಿನಂತಿರುತ್ತದೆ.

| ಕ್ರ.ಸಂ. | ಒಂದು ಕಾರ್ಯಾಲಯಕ್ಕೆ | ಮೂರು ಕಾರ್ಯಾಲಯಗಳಿಗೆ ಬೇಕಾಗಿರುವ ಒಟ್ಟುಹುದ್ದೆಗಳು |
|---|---|---|
| (ಅ) | ಉಪ ನಿರ್ದೇಶಕರು – 01 | 03 |
| (ಆ) | ಕಛೇರಿ ಅಧೀಕ್ಷಕರು – 01 | 03 |
| (ಇ) | ಪ್ರಥಮ ದರ್ಜೆ ಸಹಾಯಕರು – 01 | 03 |

| ಕ್ರ.ಸಂ. | ಒಂದು ಕಾರ್ಯಾಲಯಕ್ಕೆ | | ಮೂರು ಕಾರ್ಯಾಲಯಗಳಿಗೆ ಬೇಕಾಗಿರುವ ಒಟ್ಟುಹುದ್ದೆಗಳು |
|---|---|---|---|
| (ಈ) | ದ್ವಿತಿಯ ದರ್ಜೆ ಸಹಾಯಕರು | – 01 | 03 |
| (ಉ) | ಕಲ್ಯಾಣ ಸಂಘಟಿಕರು | – 01 | 03 |
| (ಊ) | ದಲಾಯತ್ | – 01 | 03 |
| | **ಒಟ್ಟು** | **– 06** | **18** |

ಹೊಸದಾಗಿ ಸೃಜನೆಯಾಗಿರುವ ಮೇಲಿನ ಹುದ್ದೆಗಳನ್ನು ನಿಯಮಾನುಸಾರ ಭರ್ತಿಮಾಡಲು ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 838 ವೆಚ್ಚ–6/2006, ದಿನಾಂಕ: 22–8–2006ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ಕೆ. ಕೃಷ್ಣಮೂರ್ತಿ**

ಪಿ.ಆರ್. 21

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸಹಾಯಕ ಸೇವೆಗಳು)

**ವಿಷಯ:** ಕರ್ನಾಟಕ ರಾಜ್ಯ ಗೃಹರಕ್ಷಕ ಕಲ್ಯಾಣ ನಿಧಿಯ ನಿಯಮಗಳು 1990ಕ್ಕೆ ತಿದ್ದುಪಡಿ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ 9 ಎಸ್‌ಹೆಚ್‌ಜಿ 89 ದಿನಾಂಕ:30.8.2000.

2) ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ 7 ಎಸ್‌ಹೆಚ್‌ಜಿ 2004 ದಿನಾಂಕ:22.1.2005.

3) ಪೊಲೀಸ್ ಮಹಾ ನಿರ್ದೇಶಕರು ಹಾಗೂ ಮಹಾ ಸಮಾದೇಷ್ಟರು ಗೃಹ ರಕ್ಷಕ ದಳ ಮತ್ತು ಪೌರ ರಕ್ಷಣಾ ನಿರ್ದೇಶಕರು,ಬೆಂಗಳೂರು ರವರ ಪತ್ರ ಸಂಖ್ಯೆ:ಎಸಿ(2)48 ಸಿಜಿಓ/ಕೇಂಗೃನಿಧಿ/2005–06 ದಿನಾಂಕ: 18.8.2005 ಮತ್ತು 5.4.2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ: 30.8.2000ರಲ್ಲಿ ಕರ್ನಾಟಕ ರಾಜ್ಯ ಗೃಹ ರಕ್ಷಕ ಕಲ್ಯಾಣ ನಿಧಿಯ ನಿರ್ವಹಣೆಗಾಗಿ, ಕರ್ನಾಟಕ ರಾಜ್ಯ ಗೃಹ ರಕ್ಷಕ ಕಲ್ಯಾಣ ನಿಧಿಯ ನಿಯಮಗಳು 1990, ಈ ನಿಯಮಗಳನ್ನು ಜಾರಿಗೆ ತರಲು ಸರ್ಕಾರವು ಮಂಜೂರಾತಿ ನೀಡಿರುತ್ತದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ:22.1.2005ರನ್ವಯ ಸದರಿ ಕಲ್ಯಾಣ ನಿಧಿಯ ನಿಯಮಗಳ ನಿಯಮ 5(ಬಿ) "ನಿಧಿಯ ನಿರ್ವಹಣೆ" ಅಡಿಯಲ್ಲಿನ ಕೇಂದ್ರ ಕಾರ್ಯ ನಿರ್ವಹಣಾ ಸಮಿತಿಯ ರಚನೆಯ ಕುರಿತಂತೆ ತಿದ್ದುಪಡಿ ಮಾಡಲು ಸರ್ಕಾರವು ಮಂಜೂರಾತಿ ನೀಡಿರುತ್ತದೆ.

ಮೇಲೆ (3)ರಲ್ಲಿ ಓದಲಾದ ಪೊಲೀಸ್ ಮಹಾ ನಿರ್ದೇಶಕರು ಹಾಗೂ ಮಹಾ ಸಮಾದೇಷ್ಟರು ಗೃಹ ರಕ್ಷಕ ದಳ ಮತ್ತು ಪೌರ ರಕ್ಷಣಾ ನಿರ್ದೇಶಕರು, ಬೆಂಗಳೂರು ರವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ, ಗೃಹ ರಕ್ಷಕ ದಳ ಕಲ್ಯಾಣ ನಿಧಿಯ

ನಿಯಮಗಳ ನಿಯಮ 2,3,4,9 ಮತ್ತು 10ನೇ ನಿಯಮಗಳಿಗೆ ಸಂಬಂಧಿಸಿದಂತೆ, ಗೃಹ ರಕ್ಷಕ ದಳದ ಸದಸ್ಯರಿಗೆ ಗಾಯ/ ಅಂಗವಿಕಲತೆ ಉಂಟಾದಾಗ ನೀಡುವ ಸಹಾಯ ಧನ, ಮೃತ ಸದಸ್ಯರ ಕುಟುಂಬದವರಿಗೆ ಸಹಾಯ ಧನ, ಸದಸ್ಯರ ಮಕ್ಕಳ ವಿಧ್ಯಾಭ್ಯಾಸ, ವೈದ್ಯಕೀಯ ವೆಚ್ಚದ ಮರು ಪಾವತಿ, ಮುಂತಾದ ಸೌಲಭ್ಯಗಳ ಕುರಿತಂತೆ ಕೆಲವೊಂದು ತಿದ್ದುಪಡಿಗಳನ್ನು ತರಲು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ, ಈ ತಿದ್ದುಪಡಿಗಳಿಗೆ ಸರ್ಕಾರದ ಮಂಜೂರಾತಿಯನ್ನು ಕೋರಿರುತ್ತಾರೆ.

ಪೊಲೀಸ್ ಮಹಾ ನಿರ್ದೇಶಕರು ಹಾಗೂ ಮಹಾ ಸಮಾದೇಷ್ಟರು ಗೃಹ ರಕ್ಷಕ ದಳ ಮತ್ತು ಪೌರ ರಕ್ಷಣಾ ನಿರ್ದೇಶಕರು, ಬೆಂಗಳೂರು ರವರ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 75 ಎಸ್‌ಹೆಚ್‌ಜಿ 2005, ಬೆಂಗಳೂರು, ದಿನಾಂಕ: 14ನೇ ಡಿಸೆಂಬರ್ 2006.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ರಾಜ್ಯ ಗೃಹ ರಕ್ಷಕ ದಳ ಕಲ್ಯಾಣ ನಿಧಿಯ ನಿಯಮಗಳು 1990 ಇವುಗಳಿಗೆ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದ ಪ್ರಕಾರ ಮತ್ತು ಈ ನಿಯಮಗಳ ತಿದ್ದುಪಡಿಯಿಂದಾಗುವ ಹೆಚ್ಚುವರಿ ಆರ್ಥಿಕ ಹೊರೆಯನ್ನು ಗೃಹ ರಕ್ಷಕ ದಳದ ಸದಸ್ಯರಿಂದ ಸಂಗ್ರಹ ಮಾಡಲಾದ ಚಂದಾ ಹಣ, ಸಾರ್ವಜನಿಕರಿಂದ ದೇಣಿಗೆ ಮೊತ್ತ ಮತ್ತು ಇತರ ಮೂಲಗಳಿಂದ ಭರಿಸಲು ಹಾಗೂ ಸರ್ಕಾರದಿಂದ ಹೆಚ್ಚುವರಿ ಅನುದಾನವನ್ನು ನಿರೀಕ್ಷಿಸಬಾರದೆಂಬ ನಿಬಂಧನೆಗೊಳಪಟ್ಟು ತಿದ್ದುಪಡಿ ಮಾಡಲು ಸರ್ಕಾರವು ಈ ಮೂಲಕ ಮಂಜೂರಾತಿ ನೀಡಿದೆ.

ಈ ಆದೇಶವನ್ನು ಕಾನೂನು ಇಲಾಖೆಯು ಅನಧಿಕೃತ ಟಿಪ್ಪಣಿ ಸಂಖ್ಯೆ: ಲಾ 735 ಅಭಿಪ್ರಾಯ–1 2005 ದಿನಾಂಕ:12.1.2006 ಮತ್ತು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ:ಆಇ 681 ವೆಚ್ಚ–6 2006 ದಿನಾಂಕ:22.8.2006ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ.

**ಕೆ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ)

ಆದೇಶ ಸಂಖ್ಯೆ: ಒಇ 75 ಕಗೃಸೇ 2005, ದಿನಾಂಕ: 14-12-2006ರ
ಅನುಬಂಧ

**The Amendment to the Karnataka State Home Guards Benevolent Fund revised Rules 2006**

**1. Title and Commencement** : (1) This rules may be called as the Karnataka State Home Guards Benevolent Fund (Amendment Rules 2006).

(2) They shall come in to force on the date of their publication in the Official Gazette.

**2. Amendment of Rule 2 Definitions** : Beneficiary means a member of the Home Guards both voluntary members and permanent staff including the Gazetted Officers/Dist. Commandants entitled to financial assistance from the fund and include.

**3. Amendment of Rule 3 sources of the fund** : Voluntary subscription from the members of the Home Guards both voluntary member and permanent staff including the Gazetted officers/Dist. Commandant as per the rate fixed by the managing committee the from time to time.

**4. Amendment of Rule 4 object of the Fund** : One time grant to the dependants of the Home Guards, who dies while on duty/training. The maximum financial assistance will be Rs.8000/-.

**5. Amendment of Rule 4(a) (ii) :** One time grants to the injured/disabled member of the Home Guard who get injured/disable on duty/training-The maximum financial assistance will be Rs.8000/-.

**6. Amendment of Rule 4(a) (vi)** : Grant for purpose of money earning devices to the widow/one dependant of the diseased/disabled member of the Home Guard for their livelihood in deserving cases subject to a maximum of Rs.3000/- grant in one lump sum.

**7. Amendment of Rule 4(a) xviii (a) New Rule under "objects of the fund"** : Sanction of Financial assistance to the family members of the Home Guards in the event of death under normal circumstances: Rs.5000/- will be given in one lump sum to the family members of the deceased Home Guards (New rule for incorporation).

**8. Amendment of Rule 4(a) xviii (B) New rules under "objects of the fund** : Sanction of financial assistance to the children of the members of the benevolent fund for prosecuting higher education/professional course:maximum of Rs.2000/- per child will be given subject to a maximum of 2 children for the duration of the course.

**9. Amendment of Rule 4(a) (xxi)** : One time grant to a member of the Home Guards Hospitalised as in patient in the Government Hospitals/private Nursing Home. The maximum financial assistance will be Rs.3000/- (Rs Three Thousand Only) towards purchase of medicine.

**10. Amendment of Rule 9. Accounts custody of cash and audit** : Every District managing committee shall collect the subscription once a year during and deposit---------- ------------- by 31st March of the following year.

**11. Amendment of Rule 10 Authority to sanction expenditure** : The District managing committee shall have powers to sanction expenditure from the fund up to a limit of Rs.2000/- in each case. When such expenditure is incurred a copy of the proceedings/order sanctioning the expenditure shall be sent to the Central managing committee.

**12. Amendment of Rule 10(ii)** : All expenditure exceeding Rs.2000/- by the District Managing Committee shall be sanctioned by the Central managing committee. In emergency cases the president of the Central managing committee may sanction expenditure exceeding Rs.2000/- in anticipation of the approval of the managing committee.

**13. Amendment of Rule 10 (iv)** : The president central managing committee shall have powers to sanction expenditure towards periodical committee meeting not exceeding Rs.200/- on each occasion.

**14. Amendment of Rule 10 (v)** : The President District managing committee the shall have powers to sanction expenditure towards periodical committee meetings not exceeding Rs.100/- each occasion.

**K. KRISHNA MURTHY**
Under Secretary to Government,
Home Department, (Police Auxillary Services)

P.R. 22